ಬೂತುಗನಿಗೂ ನಿಕಟವಾದ ಸ್ನೇಹವು ಬೆಳೆಯಿತು. ಮಾವನ ಮರಣದ ಬಳಿಕಂತೂ ಬೂತುಗನು ರಾಜನಾದ ಕೃಷ್ಣನ ಬಲಗೈಯೇ ಆದನು. ಹೀಗೆ ಮಾಂಡಲಿಕರ ಮಗನಾದ ಬೂತುಗನು ತನ್ನ ನಿಜಭುಜೋನ್ನತಿ ಯಿಂದ ಉನ್ನತ ಯೋಗ್ಯತಾ ಸಂಪನ್ನನಾದನು.

ಬೂತುಗನು ರಾಜಾಶ್ರಯವನ್ನು ಪಡೆದುದಲ್ಲದೆ ಜನರ ಬಲವನ್ನೂ ಸಂಪಾದಿಸಿದನು. ಇವನ ಗುಣಾತಿಶಯದ ಮೂಲಕ ಪ್ರಜೆಗಳೆಲ್ಲ ಇವ ನನ್ನು ಸನ್ನಿಯ ಗಂಗನೆಂದೂ, ಗಂಗ ಗಾಂಗೇಯನೆಂದೂ ಪ್ರೀತಿಯಿಂದ ಕರೆಯುತ್ತಿದ್ದರು. ಬೂತಗನು ನಿಜವಾಗಿಯೂ ರಣರಂಗಗಾಂಗೇಯ ನಾಗಿದ್ದನು. ಇವನ ಅಣ್ಣನಾದ ರಾಜಮಲ್ಲನು ಗಂಗಮಂಡಲವನ್ನಾಳು ತ್ತಿದ್ದುದು ಸಾಮ್ರಾಜ್ಯಕ್ಕೆ ಹಿತಕರವಾಗಿದ್ದಿಲ್ಲ. ಅಲ್ಲದೆ ತನ್ನ ಬೀಗನಾದ ಬೂತುಗನಿಗೇ ಆಸ್ಥಾನವು ದೊರೆಯುವುದು ಶ್ರೇಯಸ್ಕರವೆಂದು ರಾಷ್ಟ್ರ ಕೂಟ ಕೃಷ್ಣನ ವಿಚಾರ. ಬೂತುಗನೂ ಈ ಮಾನಕ್ಕೆ ತಕ್ಕ ಮಲ್ಲನಾಗಿ ದ್ದನು. ಆದುದರಿಂದ ರಾಜಮಲ್ಲನೆಂಬ ವಿಷವೃಕ್ಷವನ್ನು ಕಿತ್ತೊಗೆದು ಬೂತರಾಯನೆಂಬ ಕಲ್ಪವೃಕ್ಷವನ್ನು ನೆಡಲಿಕ್ಕೆ ಕೃಷ್ಣರಾಜನು ಪ್ರಯತ್ನಿ ಸಿದನು. ಬೀಗನ ಸಹಾಯದಿಂದ ಬೂತುಗನು ಅಣ್ಣನನ್ನು ಸ್ವರ್ಗ ಲೋಕಕ್ಕೆ ಕಳುಹಿಸಿ ತಾನು ಗಂಗಮಂಡಲದ ಒಡೆಯನಾದನು.

ಇತಿಹಾಸವನ್ನವಲೋಕಿಸಿದರೆ ಒಬ್ಬ ರಾಜನು ತೀರಿ ಇನ್ನೊಬ್ಬನು ಪಟ್ಟವೇರುವುದೊಂದು ಸಾಮ್ರಾಜ್ಯಕ್ಕೆ ಕುತ್ತಿನ ಪ್ರಸಂಗವೆಂದು ಹೇಳ ಬಹುದು. ಹಾಗೆಯೇ ಬದ್ದಿಗನು ಮಡಿದು ಕೃಷ್ಣನು ರಾಜನಾದಾಗ ಒಂದು ಕಂಟಕವು ಸಂಭವಿಸಿತು. ಆ ಕಂಟಕವೇ ಲಲ್ಲಿಯನೆಂಬ ಪುಂಡು ಗಾರ. ಕೃಷ್ಣನು ನಿಜವಾದ ಪಟ್ಟಬಾಧ್ಯನಲ್ಲವೆಂದೂ ತಾನೇ ಅರಸ ನಾಗಲು ಯೋಗ್ಯ ಗೋತ್ರಜನೆಂದೂ ಸಾರುತ್ತ ಲಲ್ಲಿಯನು ಬೊಬ್ಬಿರಿದು ಬಂದನು. ಆದರೆ ಕೃಷ್ಣನಿಗೆ ಬೂತುಗನೆಂಬ ಕಾಲಭೈರವನ ಬೆಂಬಲ ವಿದ್ದುದು ಆ ಮದಾಂಧನಿಗೆ ಕಾಣಿಸಲಿಲ್ಲ. ಬೂತುಗನು ಸೈನ್ಯದೊಂದಿಗೆ ಲಲ್ಲಿಯನನ್ನು ಇದಿರುಗೊಂಡನು. ಅವಘಡಿಸಿದ ಅಹಂಕಾರದಿಂದ ಲಲ್ಲಿಯನು ಬೂತುಗನ ಮೇಲೆ ಬಿದ್ದನು. ಇಬ್ಬರ ಸೇನೆಗಳೂ ಜಿನ್ನಣದಿಂದ

ತೊಡರಿಕೊಂಡವು. ಕೈದುಡುಕಿನಿಂದ ಕಾದಿದವು. ಒಂದೇ ವೈರಿಯನ್ನ
ಹೆಣೆದಿರಿಯಲಾಗಿ, ರಕ್ತದ ಕಡಲು ಹರಿಯಿತು. ಉಭಯ ಸೈನಿಕರ
ವೀರಾವೇಶದಿಂದ ಹೊಡೆದಾಡಿದರು. ಲಲ್ಲಿಯನ ಜೆಲ್ಲಾಟವು ತಗ್ಗಿತು.
ಆತನು ದೆಸೆಗೆಟ್ಟು ಓಡಿ ಹೋದನು. ಬೂತುಗನು ಈ ಬಗೆಯಾಗಿ ತನ್ನ
ಬೀಗನಾದ ಕೃಷ್ಣನಿಗೆ ರಾಜಪದವಿಯನ್ನು ಸ್ಥಿರಪಡಿಸಿ ಆತನ ಉಪಕಾರ
ವನ್ನು ತೀರಿಸಿದನು.

ದಕ್ಷಿಣದಲ್ಲಿ ಆಗ ಪಲ್ಲವರ ನೆಲೆಗೆಡಿಸಿ ಚೋಳರು ಹೆಚ್ಚಳವನ್ನು
ಪಡೆಯುತ್ತಿದ್ದರು. ಚೋಳೇಂದ್ರನಾದ ರಾಜಾದಿತ್ಯನು ಸುತ್ತುಮುತ್ತಲಿನ
ರಾಜರನ್ನೊತ್ತಿ ತನ್ನ ರಾಜ್ಯವನ್ನು ವಿಸ್ತೃತಗೊಳಿಸಲು ಹವಣಿಸುತ್ತಿ
ದ್ದನು. ಚೋಳರಾಜ್ಯಕ್ಕೂ ರಾಷ್ಟ್ರಕೂಟ ರಾಜ್ಯಕ್ಕೂ ನಡುವೆ ಗಂಗ
ಮಂಡಲವಿತ್ತು. ಆದುದರಿಂದ ಚೋಳರ ಆಘಾತಗಳು ರಾಷ್ಟ್ರಕೂಟರ
ಮೇರೆಗೆ ಹೊಂದಿರುವ ಗಂಗರ ಮೇಲೆ ಉಂಟಾಗುತ್ತಿದ್ದುವು! ಇವು
ಗಳನ್ನು ತಡೆವ ಸುಸಂಧಿಯು ತನಗೆ ದೊರೆತುದಕ್ಕಾಗಿ ಬೂತುಗನಿಗೆ
ಆನಂದವಾಯಿತು. ಆತನೂ ಆತನ ಬೀಗನೂ ಸೇರಿ ರಣಭೇರಿಯನ್ನು
ಹೊಯ್ಸಿದರು. ಅರ್ಕೋಣದ ಹತ್ತಿರಿರುವ ತಕ್ಕೋಳದ ನೆರೆಯಲ್ಲಿ ರಾಜಾ
ದಿತ್ಯನ ಸೇನಾಸಾಗರವು ಹಬ್ಬಿಕೊಂಡಿತ್ತು; ಗಂಗಬೂತುಗನೂ ರಾಷ್ಟ್ರ
ಕೂಟ ಕೃಷ್ಣನೂ ಅಲ್ಲಿಗೆ ಬಲವೆತ್ತಿ ಭೋರನೆ ಹೋಗಿ ಆ ಸೈನ್ಯದ
ಮೇಲೆ ಬರಿ ಸಿಡಿಲುಗಳಂತೆರಗಿದರು. ರಾಷ್ಟ್ರಕೂಟರ ಪಕ್ಷದವನಾದ
ಮಣಲೇರನೆಂಬ ಕಡುಗಲಿಯು ಕಡುಭಯಂಕರವಾಗಿ ಹೋರಾಡಿದನು.
ವೈರಿ ಬಲವೂ ಕೂಡ ಇವನನ್ನು ನಗರತ್ರಿನೇತ್ರನೆಂದು ಕೊಂಡಾಡಿತು.
ಬೂತುಗನೂ ಕೃತಾಂತನಂತೆ ಚೋಳ ದಳವನ್ನು ಹೊಕ್ಕನು. ಎದೆಗೆ
ಇದಿರಾಂತು ಬರುವ ಚತುರಂಗ ಬಲಗಳನ್ನು ಅಟ್ಟಿ ಮುಟ್ಟಿತಳ್ಳಿರಿದನು.
ಇದಿರಿಸುವ ಗಂಡರನ್ನು ತಾನೊಬ್ಬನೇ ತುರುಗುವೆನೆಂದು ಮುಂಬರಿದು
ಬರುವ ಬೀರರನ್ನು ಚೋಳನ ಸಾಕ್ಷಿಯಾಗಿಯೇ ದಿಂಡುಗೆಡವಿದನು.
ಬೂತುಗನು ತನ್ನ ಕೂರಾದ ಕರವಾಳದಿಂದ ಹಾದಿಯನ್ನು ಮಾಡಿಕೊ
ಳ್ಳುತ್ತ ಚೋಳನ ಪಡೆಯ ಬಸಿರೊಳಗೆ ಹೊಕ್ಕನು; ರಾಜಾದಿತ್ಯನ

ಕ್ಕುಳಿತ ಆನೆಯು ಆತನನ್ನು ಮಾರ್ಕೊಂಡಿತು; ಬೂತುಗನಿಗೆ ಹಬ್ಬ ವಾದಂತಾಯಿತು; ಚೋಳನನ್ನು ಬಳಸಿ ಬರುವ ಕಟ್ಟಾಳುಗಳನ್ನು ಆತನು ಥೊಕ್ಕನೆ ಕುತ್ತಿ ಕೆಡಹಿದನು. ಆ ರಣರಂಗದಲ್ಲಿ ಉರವಣೆಯಿಂದ ಇದಿರಾದ ಸುರಿಗೆಕಾರರನ್ನು ತೆರಪಿಲ್ಲದೆ ಕೊಂದು ಬೂತುಗನು ಭೂತಭೋಜನವನ್ನು ಮಾಡಿಸಿದನು. ಬೂತುಗನು ಟಣ್ಣನೆ ಅಂಬಾರಿಗೆ ನೆಗೆದು ರಾಜಾದಿತ್ಯ ನನ್ನು ಕಂಕುಳಲ್ಲಿ ಅವಿತುಕೊಂಡು ಕೆಳಗೆ ಜಿಗಿದನು; ಇಬ್ಬರಿಗೂ ಅತ್ಯದ್ಭುತವಾದ ದ್ವಂದ್ವ ಯುದ್ಧವಾಯಿತು; ದೂರದಿಂದ ಇದನ್ನೆಲ್ಲ ನೋಡಿದ ರಾಷ್ಟ್ರಕೂಟ ಕೃಷ್ಣನು ಹರ್ಷಪರವಶನಾಗಿ 'ನಿನ್ನಂತಹ ರಣರಂಗಸಿಂಗರುಂಟೆ! ನಿನ್ನಂಥವನು ನೀನೇ!' ಎಂದು ಹೊಗಳಿದನು; ಸೈನ್ಯವೆಲ್ಲವೂ ಒಂದೇ ಕೊರಳಿನಿಂದ ಅದನ್ನೇ ಮತ್ತೆ ಗರ್ಜಿಸಿತು! ಬೂತುಗನ ವೀರಾವೇಶವು ಇಮ್ಮಡಿಸಿ ಮುಮ್ಮಡಿಸಿ ನಾಲ್ಮಡಿಸಿತು. ಆತನು ಹಿಂದು ಮುಂದಕ್ಕೆ ಹಾರಿ, ಎಡಬಲಕ್ಕೆ ಸರಿದು, ನೆಲಕ್ಕೆ ರಾವಿ, ಗಗನಕ್ಕೆ ನೆಗೆದು, ಹಗೆಯ ಹೊಡೆತವನ್ನು ತಪ್ಪಿಸಿ, ಖಡ್ಗದಿಂದಪ್ಪಳಿಸಿ, ಢಾಲನ್ನೊಡ್ಡಿ, ತಿವಿದು ರಿಪುಶಿರವನ್ನು ಇಳುಹಿದನು; ಹೀಗೆ ಬೂತುಗನು ತನ್ನ ಶೌರ್ಯದಿಂದ ಅದ್ವಿತೀಯವಾದ ವಿಜಯವನ್ನು ರಾಷ್ಟ್ರಕೂಟ ಕೃಷ್ಣನಿಗೆ ತಂದು ಕೊಟ್ಟನು. ಇದರಿಂದ ಸಂತುಷ್ಟನಾದ ಕೃಷ್ಣನು ಆತನಿಗೆ ಬನವಾಸಿ ನಾಡನ್ನು ಉಂಬಳಿಯಾಗಿ ಕೊಟ್ಟನು.

ಈ ವಿಜಯವಾದ ಬಳಿಕ ಅವರು ತಂಜಾವರವನ್ನು ಮುತ್ತಿದರು. ಅಲ್ಲಿಯೂ ಈ ಬೂತುಗನೇ ಕದನಕ್ಕೆ ಮುಂದಾಳು. ಹೆಚ್ಚೇನು? ರಾಷ್ಟ್ರ ಕೂಟರು ಪರರಾಯರೊಡನೆ ಮಾಡಿದ ಯುದ್ಧಗಳೆಲ್ಲ ಇವನ ಬಲದಿಂ ದಲೇ; ಜಯಗಳೆಲ್ಲ ಇವನ ದೋರ್ದರ್ಪದ ಫಲಗಳೇ. ತಂಜಾವರದರಸು ಸೋತನು. ಆಮೇಲೆ ಅವರಿಬ್ಬರು ಪಲ್ಲವರ ಮೇಲೆ ಕೈ ಮಾಡಿದರು; ಪಲ್ಲವರ ರಾಜಧಾನಿಯಾದ ಕಂಚಿಯನ್ನು ಮುತ್ತಿದರು; ಕಾಳಗದಲ್ಲಿ ಪಲ್ಲವರ ಬಿಂಕವಡಗಿತು. ಪಲ್ಲವೇಂದ್ರನಾದ ಅಣ್ಣಿಗನು ಹಣ್ಣುಗಾ ದನು; ಕಂಚಿಯು ಕೈಸೇರಿತು; ಆದರೆ ಪಲ್ಲವೇಂದ್ರನು ರಾಷ್ಟ್ರಕೂಟರ ಮಾಂಡಲಿಕನಾಗಿರಲು ಒಪ್ಪಿಕೊಂಡುದರಿಂದ ಕೃಷ್ಣನು ಆತನಿಗೆ ತಿರುಗಿ

ಕಂಚಿಮಂಡಲವನ್ನೊಪ್ಪಿಸಿದನು. ತಮ್ಮ ವಿಜಯಧ್ವಜವನ್ನು ಮೆ[illegible]
ಸುತ್ತ ಬೂತುಗ ಕೃಷ್ಣರು ಮಳಖೇಡಕ್ಕೆ ಬಂದರು.

ಬೂತುಗನ ಇನ್ನೊಂದು ಮಹತ್ವದ ಕಾಳಗವೆಂದರೆ ಚೇ[illegible]
ಕಲಚೂರ್ಯರಿಗೆ ನೆರವಾದುದು. ಗುಜರಾಥವನ್ನಾಳುತ್ತಿದ್ದ ಚಾ[illegible]
ವಂಶದ ಮೂಲರಾಜನು ಕಲಚುರಿಯರ ಕಾಲಂಜರ, ಚಿತ್ರಕೂಟ[illegible]
ರಡು ಮುಖ್ಯ ಕೋಟೆಗಳನ್ನು ಮುತ್ತಿದನು. ಕಲಚುರಿಯರ[illegible]
ಸಹಾಯಕ್ಕಾಗಿ ಕೃಷ್ಣನನ್ನು ಬೇಡಿಕೊಂಡನು. ಕೃಷ್ಣನು ಬೂತುಗನ[illegible]
ಅವನ ಮಗನಾದ ಮಾರಸಿಂಹನನ್ನೂ ದೊಡ್ಡ ದಂಡಿನೊಡನೆ ಕ[illegible]
ದನು. ಒಳಗಿನವರೊಡನೆ ಕಾದಾಡುತ್ತಿದ್ದ ಚಾಳುಕ್ಯರ ಕಟಕ[illegible]
ಬೂತುಗನ ದಂಡಾಳುಗಳು ಹೊರಗಿನಿಂದ ಲಗ್ಗೆಯಿಟ್ಟರು. ಎರಡೂ[illegible]
ಯಿಂದ ಬರುವ ಕಡಲ ತೆರೆಗಳ ಹೊಯ್ತಕ್ಕೆ ಚಾಳುಕ್ಯ ಸೇನೆಯು ನು[illegible]
ನುಗ್ಗಾಗತೊಡಗಿತು. ಬೂತುಗನು ಇದಿರು ಬಂದವರನ್ನು ಚದರುತ್ತ[illegible]
ರುತ್ತ ಒತ್ತೊತ್ತಿ ಮುಂದಕ್ಕೆ ಹೋಗಿ, ಕರಿತುರಗವೀರಭಟರನ್ನು [illegible]
ವಣೆಯಿಂದ ಗೆದ್ದನು. ಆ ಹೊಯ್ಲಿನಲ್ಲಿ ಮೂಲರಾಜನ ಶೌರ್ಯೋತ್ಸಾ[illegible]
ಗಳನ್ನು ನಿರ್ಮೂಲನಮಾಡಿದನು. ಮೂಲರಾಜನು ಮುತ್ತಿಗೆಯ[illegible]
ಕಿತ್ತುಕೊಂಡು ಮರಳಿದನು. ಬೂತುಗನು ಆತನಿಂದ ಕಪ್ಪಕಾಣಿಕೆಗಳ[illegible]
ಸುಲಿದುಕೊಂಡನು. ಅಲ್ಲಿಂದ ಆತನು ಸಪ್ತಮಾಳವ ದೇಶವನ್ನು ಗೆ[illegible]
ಅದರ ಮೇರೆಯನ್ನು ಗೊತ್ತುಪಡಿಸಿದನು. ಅಲ್ಲಿ ಸೀಮೆಯ ಗುರು[illegible]
ಕಲ್ಲುಗಳನ್ನು ನಿಲ್ಲಿಸಿ, ಆ ದೇಶಕ್ಕೆ "ಮಾಳವಗಂಗ" ಎಂಬುದಾಗಿ ತ[illegible]
ಮನೆತನದ ಕುರುಹಿನ ಹೆಸರನ್ನು ಕೊಟ್ಟನು.

ಈ ಬಗೆಯಾಗಿ ಬೂತುಗನ ಚರಿತ್ರೆಯು ವಿಲಕ್ಷಣವಾದ ಅ[illegible]
ತನದಿಂದಲೂ ಸಾಹಸದಿಂದಲೂ ತುಂಬಿದೆ. ಈತನ ಮಗನಾದ ಮಾ[illegible]
ಸಿಂಹನೂ ಈತನೂ ಕೂಡಿ ಮುಳುಗುವ ರಾಷ್ಟ್ರಕೂಟರ ಸಾಮ್ರಾ[illegible]
ವನ್ನು ಬದುಕಿಸಿದ್ದೇನೋ ನಿಜ. ಆದರೆ ಆ ಸಾಮ್ರಾಜ್ಯವು ಮು[illegible]
೩೦ ವರುಷ ಕೂಡ ಬದುಕಲಿಲ್ಲ. ಅದು ಪಶ್ಚಿಮ ಚಾಲುಕ್ಯರಿಗೆ ವ[illegible]
ತುತ್ತಾಯಿತು. ಕಾಲನ ಹೊಟ್ಟೆಯೊಳಗಿನ ಗುಟ್ಟನ್ನು ಕಂಡು ಹಿಡಿ[illegible]

ರಾರು? ರಾಷ್ಟ್ರಕೂಟ ವಂಶವು ಅಸ್ತಂಗತವಾದುದಲ್ಲದೆ ಗಂಗವಂಶವು ಕೂಡ ಅಪರೊಡನೆಯೆ ಅದೇ ಸುಮಾರಿಗೆ ಪ್ರಬಲರಾಗುತ್ತಿದ್ದ ಚೋಳರಸರಿಂದ ನುಂಗಲ್ಪಟ್ಟು ಪೂರಾ ನಾಮಶೇಷವಾಗಿ ಹೋಯಿತು. ಹೀಗೆ ೧೦ನೆಯ ಶತಮಾನದ ಕೊನೆಯ ಸುಮಾರಕ್ಕೆ ಏಕಕಾಲಕ್ಕೆ ಎರಡೂ ಕುಪ್ಪಳಿಸಿಕೊಂಡು ಬಿದ್ದವು.

## ನಿಜಭುಜ ಚಕ್ರವರ್ತಿಯಾದ

# ನೂರ್ಮಡಿ ತೈಲಪ

೯೭೩-೯೯೭

ಕನ್ನಡ ಸಾರಸ್ವತಕ್ಕೆ ಉಕ್ಕು ಬಂದ ಕಾಲ. ಕರ್ನಾಟಕದ
ಕನ್ನಡ ವಾಙ್ಮಯದ ರತ್ನತ್ರಯರಾದ ಪಂಪಪೊನ್ನರನ್ನರಂತಹ
ಚಕ್ರವರ್ತಿಗಳನ್ನು ಹೆತ್ತ ಕಾಲ. ಇಂತಹ ಕಾಲದಲ್ಲಿ ತೈಲಪನೆಂ
ಮಹಾಪುರುಷನು ಬಾದಾಮಿಯ ಚಾಳುಕ್ಯವಂಶದಲ್ಲಿ ಜನ್ಮ ತಾ
ಬಾದಾಮಿಯ ಚಾಳುಕ್ಯರು ಎರಡು ನೂರು ವರುಷ ವೈಭವದಿ
ರಾಷ್ಟ್ರಕೂಟರಿಂದ ಗ್ರಸ್ತರಾಗಿ ಹೋಗಿದ್ದರೂ ಚಾಳುಕ್ಯರ ಮ
ನಾಲ್ಕು ಮನೆತನಗಳು ಅಲ್ಲಲ್ಲಿ ಟುಕುಟುಕು ಜೀವ ಹಿಡಿದುಕೊಂಡಿ
ಅವುಗಳಲ್ಲಿಯ ಒಂದರಲ್ಲಿ ತೈಲಪನ ಜನನ.

ತೈಲಪನು ಉದಯವಾದಾಗ ವಾಙ್ಮಯ ಸ್ಥಿತಿಯು ಉ
ದ್ದರೂ ರಾಜಕೀಯ ಸ್ಥಿತಿಯು ತೀರ ನಿಕೃಷ್ಟವಾಗಿತ್ತು. ಚಾ
ಸ್ಥಾನವನ್ನಾಕ್ರಮಿಸಿದ ರಾಷ್ಟ್ರಕೂಟ ದೊರೆಗಳು ಎರಡು ನೂರು
ಆಳಿ ಮುಪ್ಪಿಗೆ ಬಂದಿದ್ದರು. ಆ ಮನೆತನದ ಕೊನೆಯ ಅರಸರು
ಯುಂಪಿಗಳೂ ನಿರ್ವೀರ್ಯರೂ ಆಗಿದ್ದರು. ಅವರ ಮಾಂಡಲಿಕರು ಪ
ರಾಗಿ ಸ್ವತಂತ್ರರಾಗುವ ಹವಣಿಕೆಯಲ್ಲಿದ್ದರು. ಸಾಮ್ರಾಜ್ಯದ ಹೊ
ಶತ್ರುಗಳು ಈ ಸಂಧಿಯನ್ನು ಸಾಧಿಸಿ ರಾಷ್ಟ್ರಕೂಟರನ್ನು ಪ
ತಂದರು. ಪರಮಾರ ಸಿಯಾಕವರ್ಷನೆಂಬ ಮಾಳವೆಯ ಒಡೆ
ರಾಷ್ಟ್ರಕೂಟ ಕೊಟ್ಟಿಗನನ್ನು ಜಯಿಸಿ ಆತನ ಸಂಪತ್ತನ್ನು ಹರಣ
ದನು. ಆತನ ಮಗನಾದ ಪರಮಾರಮುಂಜನು ದೊಡ್ಡ ಸೈನ್ಯದೊ

ಕರ್ನಾಟಕದ ಮೇಲೆ ದಂಡೆತ್ತಿ ಬಂದು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡವನ್ನು ಮುತ್ತಿ ಸೂರೆಗೊಂಡನು. ಈ ರೀತಿಯಾಗಿ ರಾಷ್ಟ್ರಕೂಟ ವಂಶಕ್ಕೆ ಕ್ಷಯರೋಗವು ಹತ್ತಿತು. ಇಂತಹ ಗಂಡಾಂತರ ಸಮಯದಲ್ಲಿ, ಕರ್ನಾಟಕದೊಳಗೆ ತೈಲಪನಂತಹ ಶೌರ್ಯನಿಕೇತನನು ಹುಟ್ಟದಿದ್ದರೆ ಕರ್ನಾಟಕವು ಮಾಳವೆಯರ ಪಾಲಾಗಬಹುದಾಗಿತ್ತು. ಆ ಇಕ್ಕಟ್ಟಿನ ಸಮಯದಲ್ಲಿ ತೈಲಪನು ಕರ್ನಾಟಕವನ್ನು ಉಳಿಸಿದನು.

ಬಾದಾಮಿಯ ಚಾಲುಕ್ಯರ ಕೆಲವು ಶಾಖೆಗಳು ಅಲ್ಲಲ್ಲಿ ಬೇರೂರಿಕೊಂಡು ನಿಂತಿದ್ದವೆಂದು ಹೇಳಿದೆವಷ್ಟೆ. ಈ ಚಾಳುಕ್ಯರಲ್ಲಿ ತಮ್ಮ ಪೂರ್ವ ವೈಭವಸ್ಮರಣೆಯು ನಷ್ಟವಾಗಿರಲಿಲ್ಲ. ಒಮ್ಮೆ ವೈಭವದಲ್ಲಿ ಬೆಳೆದವರು ಆ ವೈಭವವನ್ನು ಮರೆವುದೆಂತು? ತಾವು ಸಾರ್ವಭೌಮತ್ವವನ್ನು ಕಳೆದುಕೊಂಡೆವೆಂಬ ಕಲ್ಪನೆಯು ಅವರ ಮನಸ್ಸನ್ನು ಸಣ್ಣಾಗಿ ಸುಡುತ್ತಿತ್ತು; ಪಾರತಂತ್ರ್ಯಪಂಕದಲ್ಲಿ ಅವರು ಹಗಲಿರುಳು ತೊಳಲಾಡುತ್ತಿದ್ದರು. ಆದರೆ ಮಾಡುವುದೇನು? ಯಾವುದಕ್ಕೂ ಕಾಲ ಒದಗಿಬರಬೇಕಲ್ಲವೆ? ಶತ್ರುಗಳ ದುರ್ಬಲತೆಯೂ ತಮ್ಮ ವೀರ್ಯವೂ ಕೂಡಿಬರಬೇಕಲ್ಲವೆ? ಅಂತಹ ಯೋಗವು ೯೭೩ನೆಯ ಇಸ್ವಿಯಲ್ಲಿ ಕೂಡಿ ಬಂದಿತು. ಆ ಯೋಗದ ಲಾಭವನ್ನು ತೆಗೆದುಕೊಂಡು ತೈಲಪನು ಮತ್ತೆ ಚಾಳುಕ್ಯ ವಂಶವನ್ನು ಸ್ಥಾಪಿಸಿದನು.

ಕರ್ನಾಟಕದ ವೈಭವದ ಇತಿಹಾಸವೆಂದರೆ ಮುಖ್ಯತಃ ಈ ಚಾಳುಕ್ಯ ರಾಷ್ಟ್ರಕೂಟ ಮನೆತನಗಳ ಇತಿಹಾಸ. ಇವರಿಬ್ಬರಲ್ಲಿಯೂ ಒಂದು ಬಗೆಯ ಮಲ್ಲಯುದ್ಧವು ನಡೆದಿತ್ತೆಂದು ಹೇಳಬಹುದು. ನಾಲ್ಕನೆಯ ಶತಮಾನದ ಕೊನೆಯಲ್ಲಿ ಚಾಳುಕ್ಯರ ಜಯಸಿಂಹನೆಂಬ ಅರಸನು ರಾಷ್ಟ್ರಕೂಟರ ಇಂದ್ರನನ್ನು ಸೋಲಿಸಿ, ಪಲ್ಲವರನ್ನು ಗೆದ್ದು ಚಾಳುಕ್ಯ ಸಾಮ್ರಾಜ್ಯದ ತಳಹದಿಯನ್ನು ಹಾಕಿದನು. ಬಾದಾಮಿಯ ಚಾಳುಕ್ಯರು ಎರಡು ನೂರು ವರುಷ ಆಳಿದ ಬಳಿಕ, ರಾಷ್ಟ್ರಕೂಟರ ದಂತಿವರ್ಮನು ಚಾಳುಕ್ಯರನ್ನು ಮುರಿದೊತ್ತಿ ರಾಷ್ಟ್ರಕೂಟರ ವಿಜಯಧ್ವಜವನ್ನು ಎತ್ತಿ ಹಿಡಿದನು. ಪುನಃ ಎರಡು ನೂರು ವರುಷಗಳಾದ ಬಳಿಕ, ಚಾಳುಕ್ಯರು

ರಾಷ್ಟ್ರಕೂಟರನ್ನು ಎತ್ತಿ ಒಗೆದು ಎದೆಯ ಮೇಲೆ ಕುಳಿತುಕೊಂಡ
ಹೀಗೆ ಎರಡನೆಯ ಸಲ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿ
ಶ್ರೇಯವು ನಮ್ಮ ತೈಲಪನಿಗೆ ಇರುತ್ತದೆ. ಮತ್ತೊಂದು ವಿಶೇಷ
ನೆಂದರೆ, ರಾಷ್ಟ್ರಕೂಟರ ದಂತಿವರ್ಮನು ಚಾಲುಕ್ಯರ ಅಳಿಯನಾ
ಆ ಅಳಿಯತನದ ಲಾಭವನ್ನು ತೆಗೆದುಕೊಂಡು ರಾಷ್ಟ್ರಕೂಟ ಸಾಮ್ರಾ
ವನ್ನು ನೆಲೆಗೊಳಿಸಿದನು. ಅದೇ ಮೇರೆಗೆ ತೈಲಪನಾದರೂ ರಾಷ್ಟ್ರಕೂ
ರಾಜನಾದ ಕಕ್ಕಲನ ಅಳಿಯನಾದುದರಿಂದಲೇ ಆತನಿಗೆ ಚಾಲು
ಸಾಮ್ರಾಜ್ಯವನ್ನು ಉದ್ಧರಿಸಲಿಕ್ಕೆ ಅನುಕೂಲವಾಯಿತು.

ಮಳಖೇಡವು ಮಾಳವೆಯರಿಂದ ಹಾಳಾದ ಕಾಲದಿಂದ ರಾಷ್ಟ್ರ
ಕೂಟ ಮನೆತನದಲ್ಲಿ ಶಾಂತಿ ಇದ್ದಿಲ್ಲ. ಕೊಟ್ಟಿಗನ ತರುವಾಯ ತೈಲ
ಮಾವನಾದ ಕಕ್ಕಲನು ಪಟ್ಟವೇರಿದನು. ಕಕ್ಕಲನ ಮಗಳಾದ ಜಾ
ಅಥವಾ ಜಾಕಲಾದೇವಿಯು ತೈಲಪನ ಹೆಂಡತಿ. ಮಾವನಾದ ಕಕ್ಕಲ
ರಾಷ್ಟ್ರಕೂಟ ಮನೆತನವನ್ನು ಉಳಿಸಿಕೊಳ್ಳುವ ಶಕ್ತಿಯಿಲ್ಲವೆಂಬುದ
ಮನಗಂಡೊಡನೆಯೆ ತೈಲಪನು ಅದನ್ನು ತಾನು ಸೆಳೆದುಕೊಂಡು ಅ
ನಾದನು. ಸವದತ್ತಿಯಲ್ಲಿಯೂ ಬೆಳಗಾವಿಯಲ್ಲಿಯೂ ಕೆಲವು ರಟ್ಟ
ಮನೆತನಗಳಿದ್ದವು. ಆ ಮನೆತನಗಳ ಅರಸರೂ ಮಳಖೇಡದ ಪಟ್ಟವನ್ನು
ಕಾಯುವುದಕ್ಕೆ ಹವಣಿಸಿದರು. ಅಲ್ಲದೆ ಗಂಗರ ಅರಸನಾದ ಮಾ
ಸಿಂಹನೂ ರಾಷ್ಟ್ರಕೂಟರ ಪಕ್ಷವನ್ನು ಹಿಡಿದನು. ತೈಲಪನು ತ
ಮಾವನಿಂದ ಪಟ್ಟವನ್ನು ಕಸಿದುಕೊಂಡು ಮಳಖೇಡದಲ್ಲಿ ಪಟ್ಟವೇ
ಕೂಡಲೆ ಮಾರಸಿಂಹನು ತನ್ನ ಸೋದರಳಿಯನಾದ ರಾಷ್ಟ್ರಕೂಟ ಮ
ತನದ ಇಂದ್ರನನ್ನು ತಾನು ಪಟ್ಟಕ್ಕೆ ಕುಳ್ಳಿರಿಸಿ, ಆತನು ರಾಷ್ಟ್ರಕೂಟ
ಸಾರ್ವಭೌಮನೆಂದು ಸಾರಿದನು. ಮಾರಸಿಂಹನು ಬಹಳ ಶೂರನು
ನೊಳಂಬ ಕುಲವನ್ನು ನಾಶಪಡಿಸಿ ನೊಳಂಬ ಕುಲಾಂತಕನೆಂದು ಹೆಸ
ಗೊಂಡವನು. ಇಂತಹ ಪರಾಕ್ರಮಶಾಲಿಯಾದವನು ರಾಷ್ಟ್ರಕೂಟ
ಇಂದ್ರನಿಗೆ ಬೆಂಬಲವಾಗಿ ನಿಂತುದರಿಂದ ಆತನಿಗೆ ಮಹದಾಶೆಹುಟ್ಟಿ

ತೈಲಪನಿಗೂ ಮಾರಸಿಂಹನಿಗೂ ಬನವಾಸಿಯ ಸೀಮೆಯಲ್ಲಿ ಕಡುಕದನ ವಾಯಿತು. ಆ ಕಾಳಗದಲ್ಲಿ ಮಾರಸಿಂಹನ ಸೈನ್ಯವು ಪಸರಿಸಿ ಹಬ್ಬಿ ಗೊಂಡಳಿಸಿ ಬಂದು ತೈಲಪನ ಕಲಿಸಮೂಹವನ್ನು ಮುತ್ತಿತು. ಈ ಬಗೆ ಯಾಗಿ ಉರಿದು ಎದುರಾಗಿ ಬರುವ ದುರ್ಧರ ವಿರೋಧಿಬಲವನ್ನು ತೈಲ ಪನು ತುಂಡುತುಂಡಾಗಿ ತುಂಡರಿಸಿ ಚಲ್ಲಿದನು. ಆಗ ಸಮರದಲ್ಲಿ ಎಂದೆಂದೂ ಬೆಂಗೊಡದ ಮಾರಸಿಂಹನ ವೀರರು ಬೆನ್ನು ತೋರಿಸಿ ದಿಕ್ಕಾ ಪಾಲಾಗಿ ಓಡಿಹೋದರು. ಮಾರಸಿಂಹನೂ ಕೂಡ, ಕಾಲಿಗೆ ಬುದ್ಧಿ ಹೇಳಿದನು. ಆತನು ನೆಟ್ಟಗೆ ಬಂಕಾಪುರದವರೆಗೆ ಓಡಿಬಂದು ಅಲ್ಲಿದ್ದ ತನ್ನ ಗುರುಗಳಾದ ಅಜಿತಸೇನಾಚಾರ್ಯರ ಬಳಿಯಲ್ಲಿ ನಿಂತು, ವೈರಾಗ್ಯಶೀಲ ನಾದನು. ಮತ್ತು ಮುಂದೆ ತೀವ್ರವೇ ಅಲ್ಲಿಯೇ ಮರಣ ಹೊಂದಿದನು. ಇತ್ತ ಇಂದ್ರನು ಕಂಗೆಟ್ಟು ಯಾರ ಆಶ್ರಯವೂ ಇಲ್ಲದೆ, ಅತ್ತಿತ್ತ ಅಲೆ ದಾಡಿ, ಶ್ರವಣಬೆಳಗುಳಕ್ಕೆ ಓಡಿ ಹೋಗಿ, ಅಲ್ಲಿ ಕೆಲವು ದಿವಸ ಇದ್ದು ಕೊನೆಗೆ ಸಲ್ಲೇಖನ ವಿಧಿಯಿಂದ ಎಂದರೆ ಅನಶನವ್ರತದಿಂದ ಪ್ರಾಣ ಬಿಟ್ಟನು. ಈ ತೆರನಾಗಿ ಪ್ರತಾಪನಿಧಿಯಾದ ತೈಲಪನು ರಟ್ಟರ ಕೈಯ ಲ್ಲಿದ್ದ ಇಳೆಯನ್ನೂ ಪಟ್ಟವನ್ನೂ ಸೆಳೆದುಕೊಂಡು, ರಟ್ಟರಾಜ್ಯದ ಅರಸು ಗಳನ್ನು ಮುಂಬಿಟ್ಟು ತರಿದೊಟ್ಟಿ ರಟ್ಟಘರಟ್ಟನೆನಿಸಿಕೊಂಡನು.

ಮಾಳವೆಯರು ಕರ್ನಾಟಕದ ಮೇಲೆ ದಾಳಿಯಿಟ್ಟು ಬಂದು, ಮಳ ಖೇಡವನ್ನು ಸೂರಗೊಂಡದ್ದನ್ನು ಗಂಡರಲ್ಲಿ ಗಂಡನಾದ ತೈಲಪನು ಮರೆತಿರಲಿಲ್ಲ. ಮಾಳವೆಯರು ಕರ್ನಾಟಕದ ಚಿರಶತ್ರುಗಳು. ಅವರನ್ನು ಮೆಟ್ಟದಿದ್ದರೆ ಸಾಮ್ರಾಜ್ಯದ ವರ್ಚಸ್ಸವು ಉಳಿಯುತ್ತಿರಲಿಲ್ಲ. ಆದಕಾರಣ ಸೊರ್ಮಡಿ ತೈಲಪನು ಅವರನ್ನು ಬಗ್ಗು ಬಡಿಯುವುದಕ್ಕೋಸ್ಕರ ಉತ್ತ ರದ ಕಡೆಗೆ ಯುದ್ಧಯಾತ್ರೆಗೆ ಹೊರಟನು. ಮಧ್ಯದಲ್ಲಿ ಸೇವುಣದೇಶದ (ಔರಂಗಾಬಾದ, ನಾಸಿಕ, ಖಾನದೇಶ ಜಿಲ್ಲೆಗಳು) ಅರಸನಾದ ಭಿಲ್ಲಮ ನೊಡನೆ ಸ್ನೇಹಬೆಳಿಸಿ, ಆತನೊಂದಿಗೆ ಮಾಳವೆಯ ಕಡೆಗೆ ಸಾಗಿದನು. ಮಾಳ ವೆಯ ಅರಸನಾದ ಪರಮಾರ ಮುಂಜನು ತೈಲಪನನ್ನು ಮಾರ್ಕೊಂಡು ಬಂದನು. ಪೈಠಣದ ಹತ್ತಿರ ಗೋದಾವರೀ ತೀರದಲ್ಲಿ ಉಭಯದಳಗಳು

ತಾಗಿದವು. ಅತ್ಯಂತ ಭಯಂಕರವಾದ ಕಾಳಗವೆಸಗಿತು. ಬಾಣಗಳ ಮಳೆಯಾಯಿತು; ಸುರಿಗೆಗಳ ಕಾದಾಟವಾಯಿತು. ಆ ಸುರಿಗೆ ಕಾಳಗದಲ್ಲಿ ಭುಜಪ್ರತಾಪ ವಿಭವನಾದ ತೈಲಪನು ಪರಾರಾಂತಹಿತರ ತಲೆಗಳು ಚೆಂಡು ಹೊಯ್ದಂತೆ ಹಾರಿಸಿ, ಮುಂಡಗಳನ್ನು ಚೆಂಡು ಮುಂಡಾಡಿ ಉರುಳಿಸಿದನು. ಆ ರಣಕ್ಷೋಣಿಯಲ್ಲಿ ಆಗ ಭೂತವೇತಾಳಗಳ ಹಬ್ಬವೆಂದು ಜನರು ಅಚ್ಚರಿಗೊಂಡರು. ಹೀಗೆ ತೈಲಪನು ಸುರಟು ಪರಾಂತರನ್ನು ಕೊಲ್ಲುವ ಅತ್ಯದ್ಭುತವಾದ ವೀರಾಡಂಬರವನ್ನು ಪ್ರಕಟಿಸಿದನು. ತೈಲಪನ ದಳವಾಯಿಯೊಬ್ಬನು ಶತ್ರುದಳವನ್ನು ಹೊಕ್ಕು ಕಾಳಗದಲ್ಲಿ ಪರಮಾರ ಮುಂಜನ ಆನೆಯನ್ನು ಕೊಂದು ಮಾವುತನನ್ನು ಮೆಟ್ಟಿ, ರೋಷಾವೇಶದಿಂದ ಮುಂಜನನ್ನು ಸೆರೆ ಹಿಡಿದುಕೊಂಡು ಬಂದನು. ಆಗ ತೈಲಪನ ಕಣ್ಣುಗಳಿಂದ ಆನಂದಬಾಷ್ಪಗಳುದುರಿದವು. ಆತನು ಮುಂಜನನ್ನು ಬಂಧಿಸಿ, ಬಿಗಿಯಾದ ಸೆರೆಮನೆಯಲ್ಲಿಟ್ಟನು. ಮುಂಜನು ಬಂಧನವನ್ನು ತಪ್ಪಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದನು. ಆಗ ತೈಲಪನು ಆತನನ್ನು ಕೊಲ್ಲಿಸಿಬಿಟ್ಟನು. ಇದರಿಂದ, ತೈಲಪನ ರಿಪುಗಳ ಹೃದಯದಲ್ಲಿ ಬೆದರಿಕೆಯು ಹುಟ್ಟಲ್ಪಟ್ಟುದರಿಂದ ಅವರು ತಣ್ಣಗಾದರು. ತೈಲಪನು ಮುಂದೆ ಉತ್ತರಕ್ಕೆ ಸಾಗಿಹೋಗಿ, ತನ್ನ ತಾಯಿಯ ತವರೂರೂ ಚೇದಿರಾಜ್ಯದ ರಾಜಧಾನಿಯೂ ಆದ ತ್ರಿಪುರ (ತೇವೂರ) ದಲ್ಲಿ ಕೆಲಕಾಲ ನಿಂತುಕೊಂಡು, ಉತ್ಕಲ ಅಥವಾ ಓಡಿಸಾ ದೇಶದ ಮೇಲೆ ದಂಡೆತ್ತಿ ಹೋದನು. ಆ ದೇಶದ ಅರಸನೊಡನೆ ಒಪ್ಪಂದ ಮಾಡಿಕೊಂಡು ತನ್ನ ಉತ್ತರದ ವಿಜಯಯಾತ್ರೆಯನ್ನು ಮುಗಿಸಿಕೊಂಡು ಮರಳಿ ಮಳಖೇಡಕ್ಕೆ ಬಂದನು.

ಅಷ್ಟರಲ್ಲಿ ಹುಬ್ಬಳ್ಳಿ ತಾಲೂಕು ಛಬ್ಬಿ ಮತ್ತು ಅದರ ಸುತ್ತಲಿನ ಪ್ರದೇಶವನ್ನಾಳುತ್ತಿದ್ದ ಪಾಂಚಾಲದೇವನೆಂಬೊಬ್ಬ ಮಾಂಡಲಿಕನು ತೈಲಪನ ವಿರುದ್ಧವಾಗಿ ನಿಂತನು. ಆಹವಧೀರನಾದ ತೈಲಪನು ಆತನೊಡನೆ ಯುದ್ಧಮಾಡಿ ಆತನನ್ನು ಸೆರೆಹಿಡಿದು ಆತನ ಶಿರಚ್ಛೇದವನ್ನು ಮಾಡಿದನು. ಆಗ ತೈಲಪನಿಗೆ ಶತ್ರುಗಳಾರೂ ಉಳಿಯಲಿಲ್ಲ. ಈ ರೀತಿಯಾಗಿ ಭೂಪ

ವರ್ತಿಯಾದ ತೈಲಪನು ಮೊದಲು ರಟ್ಟರನ್ನು ಕಿತ್ತು ಇಕ್ಕಿ, ಅದಟನಾದ ಮುಂಜನನ್ನು ಕನಿಕರವಿಲ್ಲದೆ ಕೊಂದು, ದೋರ್ಗರ್ವದಗುರ್ವಿನಿಂದ ಯುದ್ಧದಲ್ಲಿ ಪಾಂಚಾಳನ ತಲೆಯನ್ನು ಕೊಂಡು, ಮೀರುವ ಸಾಮಂತರ ಮೆದುಳುಗಳನ್ನು ಸೂಸಿ ಚಾಳುಕ್ಯರಾಜ್ಯ ಸಂಪದವನ್ನು ಕೈಕೊಂಡು ಪೃಥ್ವಿಯನ್ನು ನಿಷ್ಕಂಟಕವನ್ನಾಗಿ ಮಾಡಿ, ಜಗದೇಕ ವೀರನಾಗಿ ಇಪ್ಪತ್ತು ನಾಲ್ಕು ವರುಷ ರಾಜ್ಯವಾಳಿ, ಮಾರ್ಪಡೆ ಭೀಮನೆಂದೂ ಅರಿರಾಯತಲೆ ಕರಪತ್ರನೆಂದೂ ಹೆಸರುವಾಸಿಯಾದನು.

ರಾಷ್ಟ್ರಕೂಟರ ಸಾಮಂತರೆಲ್ಲರೂ ತೈಲಪನಿಗೆ ಮಾಂಡಲಿಕರಾಗಿದ್ದರು. ಸವದತ್ತಿಯ ರಟ್ಟಮನೆತನದ ಕಾರ್ತಿವೀರ್ಯನೂ ಬನವಾಸಿಯ ಭೀಮರಸನೂ ಕೊಂಕಣದ ಅಪರಾಜಿತನೂ ಸೇವುಣದ ಭಿಲ್ಲಮನೂ ಇವನಿಗೆ ಮುಖ್ಯಮಾಂಡಲಿಕರಾಗಿದ್ದರು. ಬನವಾಸಿಯ ಭೀಮರಸನು ತೈಲಪನ ಅಂಕಕಾರ (ಬಲಗೈ) ನಾಗಿದ್ದನು. ರಾಷ್ಟ್ರಕೂಟರಿಂದ ಅಪಹೃತವಾದ ವಿಶ್ವಧರಣೀತಳವನ್ನು ಈಳ್ದುಕೊಂಡು, ತನ್ನ ಬಾಹುವೀರ್ಯದಿಂದ ಚಾಳುಕ್ಯರಾಜ್ಯಸಂವರ್ಧನವನ್ನು ಮಾಡಿ ತೈಲಪನು ಪ್ರತಾಪ ಶೈಲನಾಗಿ ಮೆರೆದನು. ಆತನು ತನ್ನ ಭುಜಗರ್ವದಿಂದ ಆರ್ಜಿಸಿದ ಉರ್ವಿಗೆ ಮುನ್ನೀರೆ ಮೇರೆಯಾಗಿತ್ತು. ಆತನಕಾಲದಲ್ಲಿ ಶೌರ್ಯವೂ ಸಾರಸ್ವತವೂ ಒಂದೆಡೆಯಲ್ಲಿ ಮಿಳಿತವಾಗಿದ್ದುವು. ರನ್ನ, ಚಾವುಂಡರಾಯರಂತಹ ದಂಡನಾಯಕರು ವೀರಾಗ್ರಗಣ್ಯರಾಗಿದ್ದರಲ್ಲದೆ ವಿದ್ಯಾಗ್ರಗಣ್ಯರೂ ಆಗಿದ್ದರು. ಮಹಾಕವಿಯಾದ ರನ್ನನು ತನ್ನ ಗದಾಯುದ್ಧವನ್ನು ಬರೆದುದು ಈ ನೂರ್ಮಡಿ ತೈಲಪನ ಆಶ್ರಯದಲ್ಲಿಯೆ. ಆತನು ತೈಲಪನನ್ನು ಈ ರೀತಿಯಾಗಿ ಬಣ್ಣಿಸಿರುತ್ತಾನೆ:—'ಸಮಸ್ತ ಭುವನಾಶ್ರಯಂ, ಶ್ರೀಪೃಥ್ವೀವಲ್ಲಭಂ, ಮಹಾರಾಜಾಧಿರಾಜಂ, ರಾಜಪರಮೇಶ್ವರಂ. ಪರಮಭಟ್ಟಾರಕಂ, ಕರಹಟಭಯಂಕರಂ, ಜಾದಿಳಾಂಧ್ರಕುಲೀನ ಭುವನಸದ್ಗುಣಮಣಿವಿಭೂಷಣಂ, ಸಿಂಧುರಕಂಧರಾಧಿರೂಢಪಲ್ಲಿ ಕೋಟೋಲ್ಲಂಘನಂ, ಭದ್ರಕವಿದ್ರಾವಣಂ, ಕೊಂಕಣ ಭಯಂಕರಂ, ಉಭಯಬಲದಲ್ಲಣಂ, ಮಾರ್ವಲೆವರಿಗಜಕೇಸರಿ, ಕರೀಂದ್ರಕಂಠೀರವಮಲ್ಲಂ, ವೈರಿಫಣೀಂದ್ರ

ಸೌಪರ್ಣಂ, ಕ್ರಾಕಲಿಕರಾಜಗಜಕೇಸರಿ, ರಣಕುಂಭಿಕುಂಭಕಂಠೀ
ಯಾದವಕುಲಾಂಬರದ್ಯುಮಣಿ, ರಣರಂಗಭೀಷಣಂ, ರಿಪುಬಲ
ಗಜಘಟಾಭಂಜನನುಂ, ಸಾಮಂತ ಮೃಗ ಶಾರ್ದೂಲರಣರಂಗರಾಕ್ಷ
ಅಕಲಂಕರಾಮ ತಳವರ್ಗತಳಪ್ರಹಾರಂ, ಅರಿಷ್ಟ ಘರಟ್ಟ ರಾಷ್ಟ್ರ
ಕಾಳಕೂಟಂ, ನಿಜಭುಜಚಕ್ರವರ್ತಿ, ಪಾಂಚಾಲ ಮದೇಭ ಪಂಚಾ
ಸಂಹಾರಸಿಂಹಿತ್ವ ಘೂರ್ಜರವಜ್ರದಾಢಾಘೂರ್ಜರಭಯಜ್ವರ ಸ್ವ
ಮಾಳವ ಸಪ್ತಾರ್ಚಿಶತ್ರುಗ್ರಹೋಚ್ಚಾಟನುಂ, ಮತ್ತಮನೇಕ
ಧೀಶ್ವರಂ, ಪರನೃಪಮದಗಜಘಟಾಭಂಜನನುಂ ಉತ್ಪಕ್ಯಮಲ್ಲಂ.

ಶೂರಸಾಹಸಿಯಾದ

# ಹೊಯ್ಸಳ

೧೧೦೬

ಶೂರರಲ್ಲಿ ಕ್ಷಾತ್ರತೇಜವು ಅವ್ಯಾಹತವಾಗಿ ಒಳಗೆ ಪ್ರಜ್ವಲಿಸುತ್ತಿದ್ದರೂ ಯಾವಾಗಲೂ ಬಹಿರಂಗವಾಗಿ ಮಿಂಚುತ್ತಿರುವುದಿಲ್ಲ. ಆದಕಾರಣ ಅನೇಕ ಕ್ಷಾತ್ರಶಿಖಾಮಣಿಗಳು ತಮ್ಮ ರಕ್ತದಲ್ಲಿ ಶೌರ್ಯಬಿಂದುಗಳು ಓತಪ್ರೋತವಾಗಿ ತುಂಬಿದ್ದರೂ ಅವನ್ನು ಮುಚ್ಚಿಕೊಂಡು ಅನೇಕ ಕಾಲದವರೆಗೆ ಅನ್ಯ ವ್ಯವಸಾಯದಲ್ಲಿ ತೊಡಗಿರುತ್ತಾರೆ. ಅವರಲ್ಲಿ ಅಡಗಿಕೊಂಡಿದ್ದ ತೇಜಸ್ಸು ಯಾವುದೊಂದು ಪ್ರಸಂಗದಲ್ಲಿ ಥಳಕ್ಕನೆ ಹೊರಹೊಮ್ಮಿತೆಂದರೆ, ಕೆಲವು ಗುರುಗಳು ಅವರ ರಾಜತ್ವಯೋಗ್ಯತೆಯನ್ನು ಕಂಡುಹಿಡಿದು ಪ್ರೋತ್ಸಾಹಿಸಿ ಅವರಿಂದ ಹೊಸ ರಾಜ್ಯವನ್ನು ಕಟ್ಟಿಸುತ್ತಾರೆ. ಸಳನೆಂಬೊಬ್ಬ ಸಾಮಾನ್ಯ ವೀರನು ಒಂದು ಸಮಯದಲ್ಲಿ ಹೀಗೆ ಪ್ರಕಾಶಮಾನನಾಗಿ ಜಿನಮುನಿಯ ಉಪದೇಶದಿಂದ ಹೊಯ್ಸಳ ಕುಲಸ್ಥಾಪಕನಾದನು.

ಮೈಸೂರ ದೇಶದ ಕಡೂರ ಜಿಲ್ಲೆಯಲ್ಲಿ ಅಂಗಡಿಯೆಂಬುದೊಂದು ಚಿಕ್ಕ ಊರು. ಸುಮಾರು ಸಾವಿರ ವರುಷಗಳ ಪೂರ್ವದಲ್ಲಿ ಶಶಕಪುರವೆಂದು ಅದಕ್ಕೆ ಹೆಸರು. ಅದರ ನೆರೆಯಲ್ಲಿ ವಾಸಂತಿಕಾ ಅಥವಾ ವಸಂತಮ್ಮನ ಗುಡಿಯುಂಟು. ಅಲ್ಲಿ ಸುದತ್ತನೆಂಬ ಜೈನಯತಿ ವಾಸಿಸುತ್ತಿದ್ದನು. ಅವನ ಹೃದಯದಲ್ಲಿ ಪ್ರದೀಪ್ತವಾಗಿದ್ದ ಜ್ಞಾನವು ಗಂಭೀರವಾದ ಮುಖದಲ್ಲಿ ಕಾಂತಿರೂಪವಾಗಿ ಒಡಮೂಡಿತ್ತು. ಆಧ್ಯಾತ್ಮದಲ್ಲಿ

ಅಭಿರುಚಿಯುಳ್ಳ ಸಳನು ಆ ಸುದತ್ತಯತಿಯ ಶಿಷ್ಯನಾಗಿದ್ದನು. ಜ್ಞಾನಸಂಪಾದನೆಗಾಗಿ ಪ್ರತಿನಿತ್ಯವೂ ಸ್ವಾಮಿಯ ಸನ್ನಿಧಾನಕ್ಕೆ ನಿಂದ ಪಾಠ ಹೇಳಿಸಿಕೊಳ್ಳುವುದಕ್ಕೆ ಬರುತ್ತಿದ್ದನು.

ಸಳನು ಸೋಮವಂಶಕ್ಕೆ ಸೇರಿದ ಯದುಕುಲದವನು. ಸ್ವಭಾವಕ್ಕೆ ತಕ್ಕಂತೆ ಮೃಗಯಾವಿನೋದ ಮೊದಲಾದ ವೀರ ಕಾರ್ಯಗಳು ಆತನಿಗೆ ತೀರ ಪ್ರಿಯವಾಗಿದ್ದುವು. ಆತನು ಚೇ ಒಳ್ಳೆಯ ಚಪಲನೂ ಧೀರನೂ ವೀರನೂ ಆಗಿದ್ದನು. ಒಂದು ದಿನ ದಲ್ಲಿ ಸಳನು ಸಿಡಿಲಂತೆ ಗರ್ಜಿಸಿ ಎರಗುವ ಸಿಂಹಸಮೂಹವನ್ನು ಕಿರಿದು, ಅತಿರಭಸದಿಂದ ಭರ್ರನೆ ಬಂದು ಹಾಯುವ ಸೂಕರಾನೀಕ ತಡೆದೊತ್ತಿ, ತೊತ್ತಳದುಳಿಯುತ್ತ ಬರುವ ಮತ್ತದಂತಿಸಂತತಿ ಹೊಡೆದೆಳೆದು ಭೀಕರವಾದ ಮೃಗಯಾವಿಹಾರದಿಂದಿರಲು ಚಿ ಬೆದರಿದುವು; ತೋಳಗಳು ಕದಲಿದುವು; ಕರಡಿಗಳು ಹುದುಗಿ ಕಾಡು ಕೋಣಗಳು ಚದರಿದವು; ಎರಳೆಗಳ ಎದೆಯೊಡೆಯಿತು; ಹಕ್ಕಿ ಹೌಹಾರಿದವು. ಆ ಕೋಲಾಹಲದಿಂದ ಸಹ್ಯಾದ್ರಿಯ ಉತ್ತುಂಗ ಶ್ರೇಣಿಗಳು ಬಿರಿದುವು. ಹೀಗೆ ಅನೇಕ ಕ್ರೂರ ಪಶುಗಳ ತೊ ಬಿಚ್ಚಿ, ಎಲುವನ್ನು ಕೊಚ್ಚಿ, ಮೃಗಯಾವಿಲಾಸವನ್ನು ತೀರಿಸಿಕೊ ಸಳನು ಗುರುಗಳ ಬಳಿ ಸಾರಿದನು. ದಣುವಾರಿಸಿಕೊಂಡು ಧರ್ಮಶ್ರ ಮಾಡುತ್ತ ಕುಳಿತನು. ಆಗಲ್ಲಿದ್ದವರು ಇಬ್ಬರೇ. ಅಷ್ಟರಲ್ಲಿ ಒಂದು ಪೆ ಲಿಯು ಗುಮುಗುತ್ತ ಜಿಗಿಯುತ್ತ ಅಡವಿಯೊಳಗಿಂದ ವಸಂತ ಗುಡಿಗೆ ಬಂದಿತು. ದೃಢಚಿತ್ತನಾದ ಸನ್ಯಾಸಿ ಬೆಚ್ಚಲಿಲ್ಲ; ಧೈರ್ಯ ದ್ದಾಮನಾದ ಸಳನೂ ಅಳುಕಲಿಲ್ಲ. ಇಬ್ಬರೂ ಸ್ಥಿರಾಸೀನರಾಗಿ ಮೈ ಮರೆದು ಕುಳಿತ ಅವರ ಗಂಟಲಿಗೆ ಆ ಹೆಬ್ಬುಲಿಯು ತನ್ನ ಹದ ಪಂಜರವನ್ನು ಎತ್ತಿತು. ಇನ್ನೊಂದು ಕ್ಷಣದಲ್ಲಿ ಇವರ ಗಂಟಲುಗ ಸೀಳಿ ಅಸುವನ್ನು ಹೀರುವುದಿತ್ತು. ಆಗ ಸುದತ್ತಮುನಿಯು 'ಹೊ ಸಳ' ಎಂದು ತನ್ನ ಕೈಯಲ್ಲಿದ್ದ ಸೆಳೆ (ಬೆತ್ತ) ಯನ್ನು ನೀಡಿದನು. ಸ ಅದನ್ನು ತೆಗೆದುಕೊಂಡು ಆರ್ಭಟಿಸಿ ಬರುತ್ತಿರುವ ಆ ಹೆಬ್ಬು

ಬಾಯಲ್ಲಿ ಅದನ್ನು ತಿವಿದು ತುಂಡರಿಸಿದನು. ಗುರುವಾದ ಸುದತ್ತನು ಇದಕ್ಕೆ ಮೆಚ್ಚಿದನು. ಆತ್ಮಾನಾತ್ಮ ವಿವೇಚನೆಯಲ್ಲಿ ಕಾಲ ಕಳೆವುದಕ್ಕಿಂತ ಈ ಕ್ಷತ್ರಿಯ ರತ್ನವು ಶೌರ್ಯಸಾಹಸಗಳಿಂದ ನಿರ್ಜಿತವಾದ ರಾಜ ಸಿಂಹಾಸನದಲ್ಲಿಯೇ ಶೋಭಿಸುವುದು ಯೋಗ್ಯವೆಂದು ಸುದತ್ತನಿಗೆ ಎನಿಸಿತು. ಆತನು ಸಳನಿಗೆ ಧೈರ್ಯಶೌರ್ಯಗಳು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುವಂತೆಯೂ ಸ್ಫೂರ್ತಿಯುಂಟಾಗುವಂತೆಯೂ ಆಶೀರ್ವಾದವು ಬೆಳಗುವಂತೆಯೂ ಉಪದೇಶವನ್ನಿತ್ತನು.

ಜೈನಧರ್ಮಕ್ಕೆ ಆಧಾರಸ್ತಂಭದಂತಿದ್ದ ಗಂಗವಂಶವೂ ರಾಷ್ಟ್ರಕೂಟ ವಂಶವೂ ಊರ್ಜಿತಾವಸ್ಥೆಯಲ್ಲಿದ್ದಾಗ ಆ ರಾಜರು ಚೋಳರ ಆವೇಗವನ್ನು ತಡೆದು ನಿಲ್ಲಿಸಿದ್ದರು. ಆ ಎರಡು ವಂಶಗಳ ಶೌರ್ಯದ ಗಟ್ಟಿ ಕರಗಿದ ಬಳಿಕ ಆ ವಂಶಗಳನ್ನು ಹತ್ತಿಕ್ಕಿ ಚೋಳರು ಗಂಗರಾಜ್ಯದಲ್ಲಿ ತಮ್ಮ ಅರಸೊತ್ತಿಗೆಯನ್ನು ಪಸರಿಸಿದ್ದರು. ರಾಷ್ಟ್ರಕೂಟ ರಾಜ್ಯವನ್ನು ಪಶ್ಚಿಮಚಾಲುಕ್ಯರು ತಮ್ಮ ಛತ್ರದ ನೆಳಲಿನಲ್ಲಿ ಸೇರಿಸಿಕೊಂಡಿದ್ದರು. ಅಂತು, ಈಗ ಸಳನ ತಾಯ್ನಾಡು ಚೋಳಾಧೀನವಾಗಿತ್ತು. ಅದರ ಸಂಕೋಲೆಯನ್ನು ಕಿತ್ತೊಗೆದು ಸ್ವರಾಜ್ಯವನ್ನು ಸ್ಥಾಪಿಸುವುದೇ ಅವನ ಮೊದಲನೆಯ ಕರ್ತವ್ಯವಾಯಿತು. ಚೋಳರ ಧ್ವಜವನ್ನು ಕೀಳುವುದು ಸಾಮಾನ್ಯ ಕಾರ್ಯವಲ್ಲ. ಸಳನು ಚೋಳರಿಗೂ ಚಾಳುಕ್ಯರಿಗೂ ಇದ್ದ ಹಗೆತನದ ಲಾಭವನ್ನು ಪಡೆಯ ಬಯಸಿದನು. ಚೋಳರ ಮೂಲೋತ್ಪಾಟನ ಮಾಡಬೇಕೆಂದೇ ಚಾಳುಕ್ಯರ ಉದ್ದೇಶವಿದ್ದುದರಿಂದ ಅವರು ಸಹಜವಾಗಿಯೇ ಸಳನ ಹೆಗಲ ಮೇಲೆ ಕೈಹಾಕಿದರು. ಆ ಮೇಲೆ ಸಳನು ಚೋಳರೊಡನೆ ಜಗಳ ಹೂಡಿದನು. ಇವನ ಸಮ್ಮುಖದಲ್ಲಿ ಚೋಳರಾಜನ ಸುಭಟರು ಇಟ್ಟಣಿಸಿದರು. ಹುಯ್ಲಿಗೆ ಆರಂಭವಾಯಿತು. ಮೃಗಯಾವಿನೋದಿಯಾದ ಸಳನು ಪರಸೈನ್ಯದಲ್ಲಿ ಮನುಷ್ಯರ ಬೇಟೆಯಾಡಿದನು. ಚೋಳ ಅರಸನು ಮುನಿಮುನಿದು ಕಾದಿದನು; ಸಳನೂ ಹುರಿಗೊಂಡು ಕೋಪಾಟೋಪದಿಂದ ಆತನಿಗೆ ಇದಿರಾದನು. ಚೋಳನು ಕಂಗೆಟ್ಟು ಮುಂಗಾಣದೆ

ತನ್ನ ರಾಜ್ಯವನ್ನು ಸೇರಬೇಕಾಯಿತು. ಸಳನ ನಾಡಿನ ಬೇಡಿಗ
ರಿಸಿದುವು; ಆತನು ಹೊಸ ರಾಜ್ಯಸ್ಥಾಪಕನೆಂದು ಹೊಗಳಿಸಿಕೊ
ತನ್ನ ಸ್ವರಾಜ್ಯಸ್ಥಾಪನೆಗೆ ಬೀಜವಾಕ್ಯದಂತಿರುವ "ಹೊಯ
ಎಂಬ ಜಿನಮುನಿವರನ ಉದ್ಗಾರವೇ ಆತನ ಉಪನಾಮವಾಯಿತು.
ಶೌರ್ಯವನ್ನು ಪ್ರಕಟಗೊಳಿಸಿ ಸ್ವಾತಂತ್ರ್ಯ ಯುದ್ಧದ ಹಾದಿಗೆ
ಆ ಹುಲಿಯೂ ಸುದತ್ತಗುರುವಿನ ಸೆಳೆಯೂ ಧ್ವಜಚಿಹ್ನಗಳಾ
ಹೀಗೆ, ಸಳನ ಹೆಸರು ಆತನ ಇತಿಹಾಸದ ಸ್ಮಾರಕವಾಯಿತು;
ಕೆಯು ಆತನ ಪ್ರತಾಪದ್ಯೋತಕವಾದ ಕುರುಹಾಯಿತು.

ಮುಂದೆ, ಈ ಹೊಯ್ಸಳವಂಶವು, ಚಾಳುಕ್ಯರು ಸೊರಗಿದ
ಸಾಧಿಸಿ ಅವರನ್ನು ಮುರಿದಿಕ್ಕಿ ಸಾರ್ವಭೌಮತ್ವವನ್ನು ಪಡೆದು,
ಶ್ರೀಯ ವಿಲಸಿತಾವಾಸವಾಗಿಯೂ ಯಶೋವನಿತೆಯ ವಿರಾಮ
ವಾಗಿಯೂ ಉದ್ಯದ್ಗುಣ ಮೌಕ್ತಿಕಗಳ ಆಗರವಾಗಿಯೂ ಶರಣ
ಧರಣೀಶ್ವರರ ಆಶ್ರಯದುರ್ಗವಾಗಿಯೂ ಕಲಾನಿಧಿಯಾಗಿಯೂ
ಮೂರು ನೂರು ವರುಷಗಳವರೆಗೆ ಘನತೆಯಿಂದ ರಾಜ್ಯವನ್ನಾಳಿತು.

## ರಣಭೈರವಿಯಾದ

# ಅಕ್ಕಾದೇವಿ

೧೦೨೧ - ೧೦೫೫

ದೇಶದ ಪರಿಸ್ಥಿತಿಯೇ ಶೌರ್ಯಕ್ಕೆ ಪೋಷಕವಾದುದು. ಎಲ್ಲ ಕಡೆಯಿಂದಲೂ ವೀರಗರ್ಜನೆಯೂ ಕೈದುಗಳ ಖಣಖಣಾಟವೂ ಜಯನಿನಾದವೂ ಒಟ್ಟಾಗಿ ಸೇರಿ ವಾತಾವರಣದಲ್ಲಿ ಅತ್ಯದ್ಭುತವಾದ ತರಂಗಗಳೆದ್ದವೆಂದರೆ ಜನಜೀವನದಲ್ಲಿ ಶೌರ್ಯದ ಸಂಚಾರವಾಗುತ್ತದೆ. ಹೆಂಗಸರು ಕೂಡ ಗಂಡಸರಿಗೆ ಸರಿಮಿಗಿಲಾದ ಕಡುಗಲಿಗಳಾಗುತ್ತಾರೆ; ಆಗ ಹುಟ್ಟುವ ಸಂತತಿಯೆಲ್ಲವೂ ಪರಾಕ್ರಮ ಸಂಪನ್ನವಾಗುತ್ತದೆ. ಇದಕ್ಕನುಗುಣವಾಗಿ ಕರ್ನಾಟಕದಲ್ಲಿ ಅನೇಕ ವೀರಸ್ತ್ರೀಯರು ತೋಳ್ಬಲದ ದುಂದುಭಿಯನ್ನು ಮೊಳಗಿದರು. ಘನಶೌರ್ಯದ ಮಹಾಪ್ರವಾಹದಂತಿರುವ ಚಾಳುಕ್ಯ ವಂಶದಲ್ಲಿ ಮೈಲಾಳದೇವಿ, ಕೇತಳದೇವಿ ಮೊದಲಾದವರು ರಾಜ್ಯಭಾರಗಳನ್ನು ವಹಿಸಿದ್ದರು. ಈ ಅಕ್ಕಾದೇವಿಯೂ ಚಾಳುಕ್ಯವಂಶದಲ್ಲಿ ಹುಟ್ಟಿದ ವೀರಸ್ತ್ರೀಯು. ಅವಳು ಕದನದಲ್ಲಿ ತೋರಿಸಿದ ಆಟೋಪವೂ ಕಿಸುಕಾಡು (ಬಿಜಾಪುರ ಜಿಲ್ಲೆ) ನಾಡಿನಲ್ಲಿ ಅರಸುಗೈದ ಚಾಣಾಕ್ಷತೆಯೂ ವರ್ಣನಾತೀತವಾಗಿವೆ. ಇಂತಹ ಸ್ತ್ರೀರತ್ನಗಳಿಂದಲೂ ಅವರ ಹೊಟ್ಟೆಯಿಂದ ಹುಟ್ಟಿದ ಪುರುಷಸಿಂಹರಿಂದಲೂ ಕರ್ನಾಟಕವು ಅಷ್ಟೈಶ್ವರ್ಯದ ಅಟ್ಟಹಾಸದಿಂದ ಮೆರೆದುದೇನಾಶ್ಚರ್ಯ?

ಈ ಅಕ್ಕಾದೇವಿ, ಕೀರ್ತಿದೇವತೆಯ ಆವಾಸಸ್ಥಾನದಂತಿದ್ದ ಚಾಳುಕ್ಯಾನ್ವಯದ ಜೀರ್ಣೋದ್ಧಾರಕನಾದ ತೈಲಪನ ಮೊಮ್ಮಗಳು; ಆತನ ಕಿರಿಮಗನಾದ ಯಶೋವರ್ಮನ ಮಗಳು; ಚಾಳುಕ್ಯಚಕ್ರವರ್ತಿಗಳಲ್ಲಿ

ಪ್ರಸಿದ್ಧನಾದ ಜಯಸಿಂಹನ ಅಕ್ಕ. ಕಿಸುಕಾಡು ಎಪ್ಪತ್ತೂ
ಆರೂ ಪಾಸವಾಡಿ ಸೂರಾನಾಲ್ಕತ್ತೂ ಈಕೆಯ ಪ್ರಭುತ್ವಕ್ಕೆ ಸೇ
ಅವಳು ಆ ಪ್ರದೇಶವನ್ನು ೧೦೨೨ ರಿಂದ ೧೦೫೫ರವರೆಗೆ ಆಳಿದಳು.
ತಮ್ಮನಾದ ಜಯಸಿಂಹನೂ ಆತನ ಮಗನಾದ ಆಹವಮಲ್ಲ ಸೋ
ಶ್ವರನೂ ಈ ಅವಧಿಯಲ್ಲಿ ಚಾಳುಕ್ಯ ಸಾರ್ವಭೌಮರಾಗಿದ್ದರು.
ನುಡಿಗಳಿಂದ ಜನಕ್ಕೆ ಬೇಕಾದವಳು; ಗುಣದ ಬೆಡಂಗಿಯೆಂದು
ಕೊಂಡಳು. ಈಕೆಯ ಹಲವು ಕಾಳೆಗಗಳಲ್ಲಿ ಗೋಕಾವಿಯದು
ವಾದುದು. ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿ ಈಗ ಹಾ
ಮುಳ್ಳುಗಳ್ಳಿ ಬೆಳೆದ ವಿಕ್ರಮಪುರ ಅಥವಾ ಅರಸಿಬೀದಿಯೇ
ರಾಜಧಾನಿ.

ಕೋಕಾಗೆ (ಗೋಕಾವಿ)ಯ ಕೊತವಾಲನು ಕೊಬ್ಬಿ ಚಾ
ಪ್ರತಿಯಾಗಿ ಬಂಡನ್ನೆಬ್ಬಿಸಿದನು. ಆಗ ಸೋಮೇಶ್ವರನು ದೊ
ಸ್ದನು. ಜರಿಯನ್ನೊರಸುವುದಕ್ಕೆ ತೋರಗದೆಯೇಕೆಂದು ಆ ಚಕ್ರ
ಯನ್ನು ನಿಲ್ಲಿಸಿ ಅಕ್ಕಾದೇವಿ ತಾನೇ ಮುಂದಾದಳು. ಕೆಲವು ತು
ಗಳ ದಂಡಿನ ಕೂಡ ಆ ಪುಂಡನನ್ನು ಹಣಿಯಲು ಹೊರಟಳು. ಗೋ
ವಿಗೆ ಮುತ್ತಿಗೆಯಿಟ್ಟಳು. ತ್ರೈಲೋಕ್ಯಮಲ್ಲನಾದ ಸೋಮೇಶ್ವ
ಬರದೆ ಅಕ್ಕಾದೇವಿ ಬಂದುದರಿಂದ ಕೊತವಾಲನು ಹಿಗ್ಗಿದನು.
ನನ್ನು ಸೋಲಿಸುವುದೇನು ದೊಡ್ಡ ಮಾತೆಂದು ಆತನು ಬಗೆದನು.
ದೇವಿಯೂ ಉಚ್ಚಂಡಭೈರವಿಯೆಂಬುದೂ ರಣರಂಗಮಾರಿಯೆಂಬುದೂ
ಕುಮತಿಗೆ ತಿಳಿಯಲಿಲ್ಲ! ಈಕೆಯ ಬಲವನ್ನೆಲ್ಲ ತರಗೆಲೆಯಂತೆ ಹಾ
ಬಿಡುವೆನೆಂದು ಉಬ್ಬಿ ಭರ್‍ರನೆ ಒಂದು ಕಾದತೊಡಗಿದನು. ಅಬಲೆಯ
ನಾಯಕತಿಯರಾಗಿ ರಣದೇವತೆಯ ಬಲಿಗೆ ತಮ್ಮ ಜೀವಗಳ
ಮುಂಪೂಡಿರುವಾಗ ಆ ಸೈನ್ಯದ ಬಲದ ಸಾಮರ್ಥ್ಯವು ಗಂಡಸರ ಸೈ
ಸಾಮರ್ಥ್ಯದ ನೂರ್ಮಡಿಯಾಗುತ್ತದೆ. ಇಷ್ಟಲ್ಲದೆ ಅಕ್ಕಾದೇ
**ನೂರ್ಮಡಿ** ತೈಲಪನ ಮೊಮ್ಮಗಳು! ಅವಳು ಕೊತವಾಲನ ಕಾಲಾ
ಗಳ ಕಾಲಾಟವನ್ನಡಗಿಸಿದಳು! ಕುದುರೆಗಳನ್ನು ನದೆಬಡೆದಳು! ಆನೆ

ಗಂಡಸ್ಥಳಗಳನ್ನೊಡೆದಳು! ಒಟ್ಟೊಟ್ಟಾಗಿ ಬರುವ ಚತುರಂಗ ಸೇನೆಯನ್ನು ತರಿತರಿದಟ್ಟಿದಳು! ಒಂದೆರಡು ನಿಮಿಷಗಳಲ್ಲಿ ಗೋಕಾವಿಯ ದಂಡು ಕಲಕಾಡಿಹೋಯಿತು. ಆದರಲ್ಲಿ ಹಲವರು ಅಳಿದರು; ಉಳಿದವರು ಕೆಲವರು ಜಾರಿದರು; ಕೆಲವರು ಶರಣೊಂದರು! ಆ ಬಟ್ಟಬಯಲಾದ ಕಣದಲ್ಲಿ ಅಕ್ಕಾದೇವಿ ಕೊತವಾಲನ ಸಮ್ಮುಖವನ್ನೈದಿದಳು. ಕೈಚಳಕದಿಂದ ಚಲಿಸುತ್ತಿರುವ ಅವಳ ಎರಡೇ ಭುಜಗಳು ಆತನಿಗೆ ಅಷ್ಟಾದಶಭುಜಗಳಾಗಿ ತೋರಿದುವು! ಒಂದೊಂದು ಹಸ್ತದಲ್ಲಿಯೂ ಒಂದೊಂದು ಹದಸವಾದ ಕೈದುಗಳು ಕಂಡುವು! ಅಕ್ಕಾದೇವಿಯು ಆತನಿಗೆ ಮಹಿಷಾಸುರಮರ್ದಿನಿಯಂತೆ ಕಾಣಿಸಿದಳು! ಆತನು ಕೈಕಾಲುಗೆಟ್ಟು ಕಕ್ಕಾವಿಕ್ಕಿಯಾಗಿ ತಪ್ಪಾಯಿತೆಂದು ಮೊರೆಹೊಕ್ಕು ಪ್ರಾಣದಾನವನ್ನು ಬೇಡಿಕೊಂಡನು. ಹೀಗೆ ಬಂಡಾಯವು ಸಂದಿ ತಣ್ಣಗಾಯಿತು.

ಅಕ್ಕಾದೇವಿಯ ಈ ಪರಾಕ್ರಮವನ್ನು ಸೋಮೇಶ್ವರನು ಅಭಿನಂದಿಸಿ ಆನಂದಭರಿತನಾದನು. ಆಗ ಆಕೆಗೆ ರಣಭೈರವಿಯೆಂಬ ಅನ್ವರ್ಥಕ ನಾಮವು ಉಂಟಾಯಿತು.

## ಆಹವಮಲ್ಲನಾದ

# ಸೋಮೇಶ್ವರ

## ೧೦೪೨-೧೦೬೮

ಚಾಳುಕ್ಯಾನ್ವಯಸಮುದ್ಧರಣನಾದ ತೈಲಪನ ತರುವಾಯದ ಪಟ್ಟವೇರಿದ ಅರಸರು ತಮ್ಮ ಶೂರತನದಿಂದಲೂ ಜಾಣತನದಿಂದಲೂ ರಾಜ್ಯವನ್ನು ವಿಸ್ತಾರಗೊಳಿಸಿ, ಕರ್ನಾಟಕದ ಕೀರ್ತಿಯನ್ನು ದಿಗಂತವ್ಯಾಪಿಯನ್ನಾಗಿ ಮಾಡಿದರು. ಅಂತಹರಲ್ಲಿ ಈ ಸೋಮೇಶ್ವರನೂ ಒಬ್ಬ. ಆತನು ತೈಲಪನ ಮರಿಮಗ. ಆತನು ಸಿಂಹಾಸನವೇರಿದಾಗ ತೇಜೋಧಾಮನಾದ ತೈಲಪನು ತೀರಿಕೊಂಡು ನಾಲ್ವತ್ತು ನಾಲ್ವತ್ತೈದು ವರ್ಷಗಳಾಗಿದ್ದವು. ಸೋಮೇಶ್ವರನಿಗೆ ಯುದ್ಧವೆಂದರೆ ಬಲು ಹಿಗ್ಗು. ಆತನು ಅನೇಕ ದುರ್ಗಾಧೀಶರನ್ನೂ ಸಾಮಂತದ್ರೋಹರನ್ನೂ ಉದ್ಧತರಿಪುಗಳನ್ನೂ ನಿರ್ಮೂಲಿಸಿ, ವಿಕ್ರಾಂತಾರಾತಿಗಳನ್ನು ಕಳಚಿ, ಧರೆಯನ್ನು ನಿಷ್ಕಂಟಕವನ್ನಾಗಿ ಮಾಡಿದನು. ಹೀಗೆ ಆತನು ಸಾಮ್ರಾಜ್ಯದೊಳಗಿನ ಅಂತಃಕಂಟಕರನ್ನು ಪಡಲ್ಪಡಿಸಿ ಸಾಮ್ರಾಜ್ಯದಲ್ಲಿ ಸಂಪೂರ್ಣವಾದ ಶಾಂತತೆಯನ್ನು ಪ್ರಸ್ಥಾಪಿಸಿದ್ದನು. ಆದರೆ, ಉತ್ತರದಲ್ಲಿ ಮಾಳವರೂ ದಕ್ಷಿಣದಲ್ಲಿ ಚೋಳರೂ ಕರ್ನಾಟಕಸಾಮ್ರಾಜ್ಯದ ಪ್ರಬಲವಿರೋಧಿಗಳಾಗಿದ್ದರು. ಅವರು ಸೋಮೇಶ್ವರನಿಗೆ ಶಾಂತಿಯಿಂದಿರಗೊಡಲಿಲ್ಲ. ಆದುದರಿಂದ, ಸೋಮೇಶ್ವರನು ತನ್ನ ಆಯುಷ್ಯವನ್ನೆಲ್ಲ ಅವರೊಡನೆ ಕಾದುವುದರಲ್ಲಿ ಕಳೆಯಬೇಕಾಯಿತು.

ಸಮರಧೀರನಾದ ತೈಲಪನು ಪರಮಾರ ಮುಂಜ ದೊರೆಯನ್ನು ಹೆಡೆಮುಡಿಗಟ್ಟಿ ತಂದು ಸೆರೆಯಲ್ಲಿಟ್ಟು, ಮುಂದೆ ಆತನನ್ನು ಕೊಲ್ಲಿಸಿದನು. ಆಗಿನಿಂದ, ಚಾಳುಕ್ಯರಿಗೂ ಮಾಳವರಿಗೂ ಇದ್ದ ವಿದ್ವೇಷವು ದಿನದಿನಕ್ಕೆ ಪ್ರವೃದ್ಧಮಾನವಾಗುತ್ತ ನಡೆಯಿತು. ಸೋಮೇಶ್ವರನ ತಂದೆಯ ಕಾಲದಲ್ಲಿ, ಮುಂಜನ ತಮ್ಮನ ಮಗನಾದ ಭೋಜನು ಅಲ್ಲಿಯ ರಾಜನಾಗಿದ್ದನು. ಅತ್ಯಂತ ವಿದ್ಯಾಪ್ರೇಮಿಯೆಂದು ಹೆಸರು ಪಡೆದ ಪ್ರಸಿದ್ಧ ಭೋಜರಾಜನು ಇವನೇ. ಆತನು ತನ್ನ ದೊಡ್ಡಪ್ಪನಾದ ಮುಂಜನ ವಧೆಯ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ, ಒಮ್ಮೆ ಕರ್ನಾಟಕದ ಮೇಲೆ ಆಕಸ್ಮಿಕವಾಗಿ ಎರಗಿ ಬಿದ್ದು, ಕರ್ನಾಟಕದ ದಂಡನ್ನು ಸೋಲಿಸಿದನು. ಅಷ್ಟರಲ್ಲಿ ಜಯಸಿಂಹನು ಸಿಂಹನಾದದಿಂದ ಆರ್ಭಟಿಸಿ ಬಂದು ಭೋಜನನ್ನು ಬೆಂಕೊಂಡು ಧಾರಾನಗರದವರೆಗೆ ಓಡಿಸಿಬಿಟ್ಟನು. ಈ ಸೋಮೇಶ್ವರನು ಪಟ್ಟವೇರಿದೊಡನೆ ಮಾಳವ ದೇಶವನ್ನು ಒಳನುಗ್ಗಿ ಭೋಜನನ್ನು ಬೆನ್ನಟ್ಟಿ, ಆತನ ರಾಜಧಾನಿಯಾದ ಧಾರಾನಗರವನ್ನು ಮುತ್ತಿದನು. ಭೋಜನು ಸುಗ್ಗಾಗಿ ಬೆಂಗೊಟ್ಟೋಡಿ ಕಲಚೂರಿರಾಜನ ಆಶ್ರಯದಲ್ಲಿ ಹೋಗಿ ನಿಂತನು. ಆಗ ಸೋಮೇಶ್ವರನು ಚೇದಿಯ ಕಲಚೂರಿ ಮನೆತನದ ಅರಸನಾದ ಕರ್ಣನ ಮೇಲೆ ಕೈಮಾಡಿದನು. ಅವನ ರಾಜಧಾನಿಯಾದ ತ್ರಿಪುರ (ತೇವೂರು) ವನ್ನು ಸುತ್ತಿ ಲಗ್ಗೆಯಿಟ್ಟನು. ಆಗ ಕರ್ಣನೂ ಭೋಜನೂ ಸೋಮೇಶ್ವರನಿಗೆ ಶರಣಾಗತರಾದರು. ಹೀಗೆ, ಈ ಕಡುಗಲಿಯು ವಿಜಯಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡು ತನ್ನ ದೇಶಕ್ಕೆ ಮರಳಿ ಬಂದನು.

ಉತ್ತರದಲ್ಲಿ ಈ ಪ್ರಕಾರವಾಗಿ ತೀವ್ರವೇ ಶಾಂತತೆಯುಂಟಾದರೂ ದಕ್ಷಿಣದಲ್ಲಿ ಉಂಟಾಗಲಿಲ್ಲ. ಚೋಳ ಚಾಳುಕ್ಯ ಇವೆರಡೂ ಸಾಮ್ರಾಜ್ಯಗಳು ಒಂದೇ ಕಾಲಕ್ಕೆ ಉದಯವಾದವು. ಅವೆರಡೂ ಸಾಮ್ರಾಜ್ಯಗಳಿಗೆ ಪ್ರಬಲರಾದ ರಾಜರು ದೊರೆತುದರಿಂದ ಅವೆರಡೂ ಘನತೆಗೇರಿದವು. ಕೊನೆಗೆ ಅವೆರಡೂ ಬಹುಶಃ ಒಂದೇ ಕಾಲಕ್ಕೆ ಮುಳುಗಿದವು. ಕಂಚೀಪಟ್ಟಣದಲ್ಲಿ ಹಿಂದಕ್ಕೆ ಆಳುತ್ತಿದ್ದ ತಮಿಳರಾದ ಪಲ್ಲವರಿಗೂ ಬಾದಾಮಿಯ

ಚಾಳುಕ್ಯರಿಗೂ ತೀಕ್ಷ್ಣವಾದ ದ್ವೇಷವಿದ್ದಂತೆಯೇ, ಅವರ ಸ್ವಾಯಸಲ್ಲಿ ಅವರ ಸ್ಥಳಕ್ಕೆ ಬಂದ ತಮಿಳರಾದ ಚೋಳರಿಗೂ ಕನ್ನ ರಾದ ಚಾಳುಕ್ಯರಿಗೂ ಪ್ರಬಲ ವೈರವಿತ್ತು. ಇತ್ತ ತೈಲಪನು ರಾಷ್ಟ್ರ ಕೂಟರನ್ನೊತ್ತಿ ಚಾಳುಕ್ಯಧ್ವಜವನ್ನೆತ್ತಿದನು. ಅತ್ತ ಚೋಳರ ಚೂ ಮಣಿಯಾದ ರಾಜರಾಜನು ಕರ್ನಾಟಕವನ್ನು ಹೊಕ್ಕು ಗಂಗವಾ ವನ್ನು ನುಂಗಿ ನೀರುಕುಡಿದನು. ಆಗ ಚಾಳುಕ್ಯರಿಗೂ ಚೋಳರಿ ಕೈಗೆ ಕೈ ಹತ್ತಲೇಬೇಕಾಯಿತು. ಪ್ರಚಂಡರಾದ ಕಲಿಮಾರ್ತಂಡ ಚಾಳುಕ್ಯ ಸಿಂಹಾಸನವು ಪ್ರಕಾಶಮಾನವಾದಂತೆಯೇ ಚೋಳ ಪೀಠ ರಾಜರಾಜ, ರಾಜೇಂದ್ರಚೋಳ, ರಾಜಾಧಿರಾಜರಂತಹ ವಿಕ್ರಾಂತಕ ರವರಿಂದ ವಿರಾಜಮಾನವಾಯಿತು. ಸೋಮೇಶ್ವರನ ಕಾಲದಲ್ಲಿ ಎ ೧೧ನೆಯ ಶತಮಾನದ ಮಧ್ಯದಲ್ಲಿ ಚಾಳುಕ್ಯಚೋಳರ ನಡುವಿನ ತನವು ಪರಮಾವಧಿಯನ್ನು ಮುಟ್ಟಿತು. ಚೋಳರು ಒತ್ತೊತ್ತಿ ಉತ್ತ ಸರಿಯಲಾರಂಭಿಸಿದರು. ಚಾಳುಕ್ಯರು ಅವರನ್ನು ಕೆಳಕ್ಕೆ ದಬ್ಬಿದ ಕಷ್ಣಾ ತುಂಗಭದ್ರಾ ನದಿಗಳ ನಡುವಿನ ಬೆಣ್ಣೆಯಂಥ ಭೂಮಿಯ ಮೇ ಎಲ್ಲರ ಕಣ್ಣು ಬಹಳ. ಆ ಪ್ರದೇಶವು ಕರ್ನಾಟಕದ ಇತಿಹಾಸ ಅನೇಕ ಕಾಳಗಗಳ ಕಣವಾಗಿದೆ. ಸೋಮೇಶ್ವರನಿಗೂ ಚೋಳರಿಗೂ ಕದನಗಳೆಲ್ಲವೂ ಬಹುತರವಾಗಿ ಈ ಸೀಮೆಯಲ್ಲಿಯೇ ಆದವು. ಒಂದು ಸಲ ಚೋಳ ಅರಸನು ಚಾಳುಕ್ಯರ ರಾಜಧಾನಿಯಾದ ಕಲ್ಯಾಣದನ ನುಗ್ಗಿ ಅದನ್ನು ಸುಟ್ಟನು. ಗಂಗ ಪೆರ್ಮಾಡಿಯು ಕರ್ನಾಟಕದ ಕಟ್ಟಿಸಿದ ಅನೇಕ ಸುಂದರವಾದ ಜೈನಬಸ್ತಿಗಳಿಗೆ ಕಿಚ್ಚಿಕ್ಕಿ ಹಾಳುಮಾ ದನು. ಚೋಳ ಅರಸನಾದ ರಾಜಾಧಿರಾಜನು ಬಹಳ ದೊಡ್ಡ ಗಂಡುಗ ಯಾಗಿದ್ದುದಲ್ಲದೆ ಅತ್ಯಂತ ಕ್ರೂರನೆಂದೂ ಖ್ಯಾತಿಗೊಂಡಿದ್ದನು. ಆತನು ಪಾಂಡ್ಯಮಹೀಶನ ರುಂಡವನ್ನು ಖಂಡಿಸಿದ್ದನು; ಕೇರಳ ಧರಣೀಶನನ್ನು ಮದವಾರಣದ ಕಾಲಿನಲ್ಲಿ ತುಳಿಸಿದ್ದನು; ಕೊಲ್ಲಿಪಾಕೆಗೆ ಕೊಳ್ಳಿ ಇಟ್ಟಿ ದ್ದನು; ಸಿಂಹಳದ್ವೀಪದ ಧರಿತ್ರೀಕಾಂತನ ಹೆಂಡತಿಯನ್ನೂ ತಂಗಿಯನ್ನು ಬಂಧನಗೊಳಿಸಿದ್ದನು; ಆತನ ತಾಯಿಯ ಮೂಗನ್ನು ಕತ್ತರಿಸಿದ್ದನು

ಇಂತಹ ಕ್ರೂರನು ಕರ್ನಾಟಕದೊಳಗಿನ ಜೈನ ದೇವಾಲಯಗಳನ್ನು ಸುಟ್ಟುದರ ಸೇಡು ತೀರಿಸಿಕೊಳ್ಳುವ ಸಲುವಾಗಿ ಸೋಮೇಶ್ವರನು ಆತನೊಡನೆ ಭಯಂಕರವಾದ ಯುದ್ಧಗಳನ್ನು ಮಾಡಲು ಅನುವಾದನು. ರಾಜಾಧಿರಾಜನೂ ಅತುಲಸೈನ್ಯದೊಂದಿಗೆ ತುಂಗಭದ್ರಾ ತೀರದಲ್ಲಿರುವ ಕೊಪ್ಪಕ್ಕೆ ಬಂದನು. ತುಳಿತಕ್ಕೆ ನೆಲವು ಕುಸಿಯುವಂತೆಯೂ, ಆರ್ಭಟಕ್ಕೆ ದಿಕ್ಕುಗಳು ನಡಗುವಂತೆಯೂ, ಕೈದುಗಳ ನೆಳೆತಕ್ಕೆ ಗಗನವು ಪ್ರಜ್ವಲಿಸು ವಂತೆಯೂ ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು. ಕೋಡೆಯೊಡೆದು ರಕ್ತದ ಕಾಲುವೆಯು ಧಾವಿಸಿ ಹರಿಯಿತು. ಸುರಿಗೆ ಕಾಳಗದಲ್ಲಿ ಸುರಿಗೆಕಾರರು ಒಬ್ಬರನ್ನೊಬ್ಬರು ಮುಸಗಿ ತೊಡರಿಕೊಂಡರು. ಚಮೂಪತಿಗಳು ಚದರಿ ಹೋದರು. ಚದರಿ ಹೋದ ಚಮೂಪತಿಗಳು ಮತ್ತೆ ಏರಿ ಬಂದು, ಫೂತ್ಕರಿಸಿ ಮೈಗೆಮೈಗೊಟ್ಟು ಚಿಮ್ಮಿ ಝುಟಿತಿಯಿಂದ ಕಾದಿದರು. ಆನೆಕಾಳಗದಲ್ಲಿ ಆನೆ—ಆನೆಗಳು ಗಂಡಸ್ಥಳಗಳಿಂದ ಇದಿರಾಡಿ, ಸೊಂಡಿಲುಗಳಿಂದ ಮುರಿದಾಡಿ, ಕಾಲು ಗಳಿಂದ ತೊತ್ತಳದುಳಿದಾಡಿ ಬಲಗಳನ್ನು ಭ್ರಮೆಗೊಳಿಸಿದವು. ಈ ದುರ್ಧರ ವಾದ ಕಾಳಗದಲ್ಲಿ, ಸೋಮೇಶ್ವರನು ರೌದ್ರಪರಾಕ್ರಮವನ್ನು ತೋರಿಸಿ ದನು. ರಾಜಾಧಿರಾಜನ ದಳವು ಆಹವಮಲ್ಲನ ಆರ್ಪಿಗೆ ಬೆಂಗೊಟ್ಟು ಓಡಿತು. ಶೂರನಾದ ಸೋಮೇಶ್ವರನು ಗಜಾರೂಢನಾಗಿ ತವಕದಿಂದ ಒಳನುಗ್ಗಿ, ಚೋಳಕಟಕವನ್ನು ಭೇದಿಸಿ ಸೂರೆಮಾಡಿ ರಾಜಾಧಿರಾಜನ ಸಮ್ಮುಖವನ್ನು ಸಾರ್ದನು. ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವೆರಗಿದಂತಾ ಯಿತು. ಇಬ್ಬರೂ ಕೈದುಗಳನ್ನು ಕೊಂಡು, ಒಬ್ಬರಿಗೊಬ್ಬರು ಸರಿಮಿಗಿ ಲೆಂಬಂತೆ ಉರುವಣೆಯಿಂದ ಕಾದಿದರು. ಸೋಮೇಶ್ವರನು ಕೊನೆಗೆ ಜಯ ಹೊಂದಿದನು. ಈ ಯುದ್ಧದಲ್ಲಿ ರಾಜಾಧಿರಾಜ ಚೋಳಿಕನು ಸತ್ತನು. ಕೂಡಲೆ ಚೋಳ ಸೈನ್ಯವೆಲ್ಲವೂ ದಿಕ್ಕಾಪಾಲಾಗಿ ಹೋಯಿತು. ನಾಡು ಬೀಡು ರಾಜ್ಯದ ಜನರೆಲ್ಲರೂ ಸೋಮೇಶ್ವರನನ್ನು ವೀರಾಧಿವೀರನೆಂದು ಒಂದೇ ಕೊರಳಿನಲ್ಲಿ ಕೊಂಡಾಡಿದರು. ಆಹವದಲ್ಲಿ ರಾಜಾಧಿರಾಜನ ತಮ್ಮ ನಾದ ರಾಜೇಂದ್ರನಿಗೂ ಗಾಯವಾಗಿತ್ತು. ಆದರೂ ರಾಜೇಂದ್ರದೇವನು

ಆ ರಣಭೂಮಿಯಲ್ಲಿಯೇ ರಣಲಕ್ಷ್ಮಿಯ ರಕ್ತಕರಗಳಿಂದ ಪಟ್ಟಾ
ಭಿಷಿಕ್ತನಾಗಿ ಬಂದು ಸೋಮೇಶ್ವರನನ್ನು ಪುನಃ ಪ್ರತಿಭಟಿಸ
ರಾಜೇಂದ್ರದೇವನ ಉರುಬಿಗೆ ಸೋಮೇಶ್ವರನ ಸೈನ್ಯವು ತಲ್ಲಣಿಸಿ
ಟ್ಟಿತು. ರಾಜೇಂದ್ರದೇವನು ಉತ್ತರಕ್ಕೆ ಕೊಲ್ಲಾಪುರದವರೆಗೆ ಹೋ
ಅಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು. ಆದರೆ ೫-೬ ವರ್ಷ
ರಾಜೇಂದ್ರದೇವನು ಮರಣ ಹೊಂದಿದನು. ಆತನ ತಮ್ಮನಾದ
ರಾಜೇಂದ್ರಚೋಳನು ಅರಸನಾದನು. ಆತನೂ ಪ್ರಬಲ ಪರಾಕ್ರಮಿ
ನಿಗೂ ಸೋಮೇಶ್ವರನಿಗೂ ಅನೇಕ ಕಾಳೆಗಗಳೆಸಗಿದವು. ಅವು
ಸೋಮೇಶ್ವರನ ಮಗನಾದ ವಿಕ್ರಮಾಂಕನು ತಂದೆಗೆ ಸಹಾಯಕ
ದ್ದನು. ಮೂರನೆಯ ಸಲ, ಸೋಮೇಶ್ವರನು ಸ್ವಹಸ್ತದಿಂದ ಪತ್ರ
ಬರೆದು ವೀರರಾಜೇಂದ್ರನು ಯುದ್ಧಕ್ಕೆ ಬರಬೇಕೆಂದು ಆಹ್ವಾನ
ಕಳುಹಿಸಿದನು. ಅದಕ್ಕೆ ಸಮ್ಮತಿಸಿ, ವೀರರಾಜೇಂದ್ರನು ಮಹಾ
ದೊಂದಿಗೆ ತುಂಗಭದ್ರಾತೀರಕ್ಕೆ ಬಂದು ತಳಊರಿದನು. ಆದರೆ ಅಷ್ಟ
ಸೋಮೇಶ್ವರನು ತೀಕ್ಷ್ಣವಾದ ಜ್ವರದಿಂದ ಪೀಡಿತನಾಗಿ ಮ
ಹೊಂದಿದನು.

ಸೋಮೇಶ್ವರನ ಮರಣವು ಅತ್ಯಂತ ಮನೋವೇಧಕವಾ
ಮೇಲೆ ಹೇಳಿದಂತೆ, ಸೋಮೇಶ್ವರನು ಮೂರನೆಯ ಸಲ ವೀ
ರಾಜೇಂದ್ರನಿಗೆ ಆಹವದ ಔತನವನ್ನು ಕೊಟ್ಟು ತಾನು ಇನ್ನು ಯುದ್ಧ
ಹೊರಡುವವನಿದ್ದನು. ಅಷ್ಟರಲ್ಲಿ ಕುರವತ್ತಿಯಲ್ಲಿ ಆತನಿಗೆ ಜ್ವರವು
ಯಿತು. ಜ್ವರವು ದಿನ ದಿನಕ್ಕೆ ಏರುತ್ತ ನಡೆಯಿತು. ಮೈಮೇಲೆ ಎಳ್ಳ
ಚಟ್ಟನೆ ಅರಳಾಗಿ ಹಾರುವಷ್ಟು ಆತನ ಮೈಯು ಕಾಯಿತು. ತಾನು
ಜ್ವರದಲ್ಲಿ ಬದುಕುವುದಿಲ್ಲವೆಂದು ಸೋಮೇಶ್ವರನಿಗೆ ತೋಚಿತು. ಹಾ
ಯಲ್ಲಿ ನರಳುತ್ತ ಹೊರಳುತ್ತ ಸಂಕಟಪಟ್ಟು ಸಾಯುವುದಕ್ಕೆ ಸೋಮೇ
ಶ್ವರನ ಮನಸ್ಸು ಒಪ್ಪಲಿಲ್ಲ. ಆದಕಾರಣ ಆತನು ತನ್ನ ಧಾರ್ಮಿಕ
ಗಳನ್ನೆಲ್ಲ ಮುಗಿಸಿಕೊಂಡು ತುಂಗಭದ್ರೆಯ ಜಲದಲ್ಲಿ ಇಳಿದನು.
ಮಾತ್ಮನನ್ನು ಧ್ಯಾನಿಸುತ್ತ ಮುಂದು ಮುಂದಕ್ಕೆ ಸಾಗಿದನು.
ಕುತ್ತಿಗೆಗೆ ಬಂದಿತು. ಅಲ್ಲಿ ಆತನು ಸ್ವಸ್ಥಚಿತ್ತದಿಂದ ಮುಳುಗಿ

ಸಮಾಧಿಯನ್ನು ಹೊಂದಿದನು. ತುಂಗಭದ್ರೆಯು ಈ ಜಗದಧಿಪನನ್ನು ಪ್ರೀತಿಯಿಂದ ತನ್ನ ತೊಡೆಯಲ್ಲಿ ಮಲಗಿಸಿಕೊಂಡು ಆತನ ಯುದ್ಧಶ್ರಮವನ್ನೂ ಜ್ವರತಾಪವನ್ನೂ ಹೋಗಲಾಡಿಸಿದಳು. ಎರಡೂ ಕಡೆಗಳಲ್ಲಿ ನಿಂತು ಈ ಕೌತುಕವನ್ನು ನೋಡುತ್ತಿರುವ ಆತನ ಪ್ರಜೆಗಳು ಆತನ ಗಂಭೀರ ಭಾವವನ್ನೂ ಶಾಂತವೃತ್ತಿಯನ್ನೂ ಧೈರ್ಯವನ್ನೂ ನೋಡಿ ಬೊಟ್ಟು ಕಚ್ಚಿದರು. ಈ ರೀತಿಯಾಗಿ ಈ ನರಾಧಿಪನು ಪರಮಯೋಗದಿಂದ ದೇಹವನ್ನು ತೊಲಗಿದನು !

ಸೋಮೇಶ್ವರನು ಅತ್ಯಂತ ಶೂರನು. ಪ್ರವಿಮಲ ಕೀರ್ತಿಯಲ್ಲಿಯೂ ವಿಭವದಲ್ಲಿಯೂ ಸಚ್ಚರಿತ್ರೆಯಲ್ಲಿಯೂ ಆರ್ಜನದಲ್ಲಿಯೂ ಮಹಾಹವಜಯದಲ್ಲಿಯೂ ಗುಣೋನ್ನತಿಯಲ್ಲಿಯೂ ಆಹವಮಲ್ಲನಿಗೆ ಆಗಿನ ಕಾಲದಲ್ಲಿ ಯಾರೂ ಸಮರಿರಲಿಲ್ಲ. ಆತನಿಗೆ ಎರಗದ ವೀರರಿರಲಿಲ್ಲ; ಅಂಜದ ಅಧಟರಿರಲಿಲ್ಲ; ಶರಣೆನ್ನದ ರಾಯರಿರಲಿಲ್ಲ; ಯಮನ ಬಾರಿಗೆ ಹೋಗದ ಯುದ್ಧಲಾಲಸರಿರಲಿಲ್ಲ; ಮೊರೆಹೋಗದ ಅಂಕಕಾರಿಯರಿರಲಿಲ್ಲ. ಇಳಿದೋಡದ ದುರ್ಗದ ಗಂಡರಿರಲಿಲ್ಲ; ದಳ್ಳಿಂದುರಿವ ರಿಪುಗಳಿರಲಿಲ್ಲ; ಆತನ ಆಳಿಕೆಯಲ್ಲಿ ಲಾಟ, ಕಳಿಂಗ, ಗಂಗ, ಕರಹಾಟ, ತುರುಷ್ಕ, ಸುರಾಷ್ಟ್ರ, ಮಾಳವ, ಕೇರಳ ಮುಂತಾದ ದೇಶಗಳ ಅರಸರು ಮಲೆತು ನಿಲ್ಲದೆ ಆತನಿಗೆ ಕಪ್ಪವನ್ನಿತ್ತು, ಆತನಿಂದ ನಿರ್ಜಿತವಾದ ಆಘಾತದಲ್ಲಿಯೇ ಇರುತ್ತಿದ್ದರು. ಆತನು ಮದ್ರ, ಅವಂತಿ, ವಂಗ, ದ್ರವಿಳ, ತುರಷ್ಕ, ಸಾಭೀರ, ಪಾಂಚಾಳ ದೇಶಗಳ ಸೈನಿಕರನ್ನು ಪೇಸೇಳಿಕೊಂಡು ಕವರ್ದು ಅಸದಳವಾಗಿ ಕೋಟಜವನ್ನು ಕೈಕೊಂಡಿದ್ದನು. ಇಷ್ಟಾದರೂ ಆತನ ತೋಳತೀನೂ ಮನದ ತವಕವೂ ಹೋಗದೆ, ಆತನು ಹೊಸ ಹೊಸ ಯುದ್ಧಗಳನ್ನು ಹೂಡುವುದಕ್ಕೆ ಸದಾ ಲಾಲಸವುಳ್ಳವನಾಗಿದ್ದನು. ಇಂತು ಚತುರಂಗ ಧಾತ್ರೀಕಾಂತೆಯನ್ನಳವಡಿಸಿ ಚಕ್ರವರ್ತಿಶ್ರೀಯನ್ನು ತಾನು ತಳೆದು, ವೈಭವದಿಂದ ರಾಜ್ಯವನ್ನಾಳಿ, ಕೊನೆಗೆ ಪರಮಯೋಗದಿಂದ ಜಲಸಮಾಧಿಯನ್ನೈದಿ ಮರಣ ಹೊಂದಿದನು. ಆದಕಾರಣವೇ ಸೋಮೇಶ್ವರನ ಆಳಿಕೆಯಲ್ಲಿ, ಚಾಳುಕ್ಯ ಸಾಮ್ರಾಜ್ಯವು ಬಹಳ ಗೌರವವನ್ನು ಪಡೆಯಿತು.

---

## ಚಕ್ರೇಶ್ವರಚೂಡಾಮಣಿಯಾದ

# ಚಾಲುಕ್ಯವಿಕ್ರಮ

### ೧೦೭೬-೧೧೨೬

ಕರ್ನಾಟಕದ ಎಲ್ಲ ಸಾರ್ವಭೌಮರಲ್ಲಿ ಚಾಳುಕ್ಯವಂಶದ ವಿ
ದೇವನು ಅಗ್ರಗಣ್ಯನು; ಅತ್ಯಂತ ಪ್ರಸಿದ್ಧನು; ಅತೀವಲೋಕಪ್ರಿ
ಮಹಾಪ್ರತಾಪಶಾಲಿ. ಆತನು ೧೧ನೆಯ ಶತಮಾನದ ಕೊನೆಯಲ್ಲಿ
ವೇರಿ ಸುಮಾರು ೫೦ ವರುಷ ಕಲ್ಪನಾತೀತವಾದ ವೈಭವದಿಂದ
ವಾಳಿದನು. ಆತನ ಆಳಿಕೆಯಲ್ಲಿ ಕರ್ನಾಟಕವು ಘನತೆಯ ಪರಮಾ
ಏರಿತ್ತು; ಶಾಂತತೆಯು ಸಂಪೂರ್ಣವಾಗಿ ನೆಲೆಗೊಂಡಿತ್ತು; ವ
ಲಕ್ಷ್ಮಿಯು ಚಾಂಚಲ್ಯವನ್ನು ತೊರೆದು ನಗುತ್ತ ಕೆಲೆಯುತ್ತ ನಲಿ
ದ್ದಳು. ಆತನ ಬಾಹುಬಲದ ನೆರವು, ಆತನ ಅಣ್ಮು, ಆತನ ಉಗ್ರ
ಸ್ಫೂರ್ತಿ, ಆತನ ಆರ್ಪು, ಆತನ ಒರ್ಮುಡಿಯ ನಿಲವು, ಆತನ ಉ
ಖ್ಯಾತಿಯ ಒಳ್ಪು, ಧರೆಗೆಲ್ಲಕ್ಕೂ ಆಶ್ಚರ್ಯಜನಕವಾಗಿದ್ದವು.
ಕೀರ್ತಿವಲ್ಲರಿ ದಿಶಾಂತರದಲ್ಲಿ ತೆರಪಿಲ್ಲದೆ ಹಬ್ಬಿ ಪಲ್ಲವಿಸಿ ಹ
ಸೌಸವವನ್ನು ಸೂರೆಮಾಡಿತು; ಆತನ ಬಿಣ್ಪು ಉಪಮಾನ
ವಾಯಿತು; ಆತನ ಚರಿತೆಯು ಶಿಖಾಪದವನ್ನೈದಿತು. ಆತನ ಪರಾಕ್ರ
ಕಳಸವಿಟ್ಟಿತು. ಈ ವಿಕ್ರಮಭೂಪನ ಭುಜಬಲದಳವೂ ಧೀರತೆಯೂ
ತೆಯೂ ವಿಜಿಗೀಷುವೃತ್ತಿಯೂ ಲೋಕದಲ್ಲಿ ಅತ್ಯದ್ಭುತವೆನಿಸಿದವ
ಸೋಮವಂಶಲಲಾಮನು, ಈ ಚಾಳುಕ್ಯೋಜ್ವಳಲಕ್ಷ್ಮೀನ
ಕರ್ನಾಟಕದ ಅಖಿಲಚಕ್ರೇಶ್ವರರಲ್ಲಿ ಕಾಂತಿಮಯವಾದ ಚೂ
ಮಣಿಯು.

ಪಟ್ಟವೇರುವ ಮುಂಚೆ ಹುಡುಗನಾಗಿರುವಾಗಲೇ ಈತನ ಶೌರ್ಯಶರಧಿಯು ಉಕ್ಕಿತ್ತು. ತಂದೆಯಾದ ಆಹವಮಲ್ಲ ಸೋಮೇಶ್ವರನು ಹೂಡಿದ ಕಾಳಗಗಳಲ್ಲಿ ಈತನು ತನ್ನ ತೋಳನ್ನು ಅವುಗಳಲ್ಲಿ ಚಾಚಿ ನೆರವಾಗಿದ್ದನು; ಅಲ್ಲದೆ ತಾನೊಬ್ಬನೇ ಹೆಗಲುಗೊಟ್ಟು ಸಮರ ಭಾರವನ್ನು ನಿರ್ವಹಿಸಿ ಜಯಶಾಲಿಯಾಗಿದ್ದನು. ತಂದೆಯ ಕಾಲದ ಈ ೨೫–೩೦ ವರುಷಗಳಲ್ಲಿ ಈತನ ಪರಾಕ್ರಮದ ಪ್ರಖ್ಯಾತಿಯು ಜಗತ್ತಿನ ಅಂಚನ್ನು ಮುಟ್ಟಿತ್ತು. ಈತನು ತನ್ನ ಅರಸೊತ್ತಿಗೆಯ ೫೧ ವರುಷಗಳಲ್ಲಿ ಅರಿಭೂಭೃದ್ವರ್ಗವನ್ನು ನುಗ್ಗಿ, ಕಂಟಕಕೋಟಿಗಳನ್ನು ಕಡಿದು, ಸಂಪ್ತಾಂಬುಧಿಸಂರುದ್ಧವಾದ ಧರಣಿಯನ್ನು ತನ್ನ ದೋರ್ಬಲದಿಂದ ಸೇರ್ಪಡಿಸಿ ಯಶಃಶ್ರೀಗೆ ಅದನ್ನು ಕೇಳೀಗೃಹಾಂಗಣವನ್ನಾಗಿ ಮಾಡಿದನು. ಹೀಗೆ ೯೦–೯೫ ವರುಷ ಸತತವಾಗಿ ಭೂಚಕ್ರವನ್ನು ಬೆಳಗಿಸಿ ವಿಕ್ರಮಾರ್ಕನು ಕರ್ನಾಟಕ ಸಾಮ್ರಾಜ್ಯದ ವಿಸ್ತಾರವನ್ನು ಬೆಳೆಯಿಸಿ ಮೆರೆದನು.

ಕರ್ನಾಟಕದ ಧರಿತ್ರೀಕಾಂತರಲ್ಲಿ ಬಾದಾಮಿಯ ವಿಖ್ಯಾತ ಪುಲಿಕೇಶಿಗೂ ಮಳಖೇಡದ ರಣವಿಗ್ರಹನಾದ ಗೋವಿಂದನಿಗೂ ರಣರಸಿಕನಾದ ಕಲ್ಯಾಣದ ಈ ವಿಕ್ರಮಾಂಕನಿಗೂ ಅನೇಕ ಸಂಗತಿಗಳಲ್ಲಿ ಸಾಮ್ಯವುಂಟು. ಈ ಮೂವರೂ ತೀರ ಚಿಕ್ಕವರಿರುವಾಗಲೇ ತಮ್ಮ ಅನ್ಯಾದೃಶ ಶಕ್ತಿಯನ್ನು ತೋರ್ಪಡಿಸಿ ಪ್ರಜಾನುರಾಗಕ್ಕೆ ಪಾತ್ರರಾದರು. ಪುಲಿಕೇಶಿಯು ಚಿಕ್ಕವನಿದ್ದರೂ ಲೋಕಪ್ರಿಯನಾಗಿದ್ದುದರಿಂದ, ತನ್ನ ಚಿಗಪ್ಪನಾದ ಮಂಗಳೇಶನನ್ನು ಮುರಿದೊತ್ತಿ ಸಿಂಹಾಸನವನ್ನಾಕ್ರಮಿಸಲು ಸಮರ್ಥನಾದನು. ಉತ್ತುಂಗಮಲ್ಲನಾದ ಗೋವಿಂದನು ತೀರ ಸಣ್ಣವನಿದ್ದಾಗ ತಂದೆಯಾದ ಧ್ರುವನ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿದನು; ಆದಕಾರಣವೇ ಧ್ರುವನು ತನ್ನ ಹಿರಿಯ ಮಕ್ಕಳನ್ನು ಪಟ್ಟದಿಂದ ಹಾರಿಸಿ ಈ ಕಿರಿಯ ಮಗನನ್ನು ಯುವರಾಜನನ್ನಾಗಿ ಮಾಡಿದನು; ಇಷ್ಟೇ ಅಲ್ಲ, ಈ ಗೋವಿಂದನ ಗುಣಾರ್ಣವಕ್ಕೆ ಮೆಚ್ಚಿ ಆತನ ಸಲುವಾಗಿ ಧ್ರುವನು ತಾನು ಸ್ವತಃ ತನ್ನ ರಾಜಪದವಿಯನ್ನು ಬಿಟ್ಟುಕೊಡಲು ಸಿದ್ಧನಾಗಿದ್ದನು. ಹಾಗೆಯೆ ವಿಕ್ರಮಾದಿತ್ಯನು ಬಾಲಕನಿರುವಾಗಲೆ ತಂದೆಯಾದ

ಸೋಮೇಶ್ವರನಿಗೆ ಅನೇಕ ಕೋಳುಗುಳಗಳಲ್ಲಿ ನೆರವಾಗಿ ಶೂರ
ಖ್ಯಾತಿಗೊಂಡಿದ್ದನು. ವಿಕ್ರಮದೇವನು ಅತ್ಯಂತ ಕುಶಲನು; ಮಾ
ಪ್ರಿಯನು; ಪ್ರಜಾರಂಜಕನು. ಅಂತೆಯೆ ಅಣ್ಣನಾದ ತನೆಯ ಸೋ
ಶ್ವರನನ್ನು ತಳ್ಳಿ ಸಿಂಹಾಸನವನ್ನೇರುವುದು ಅವನಿಂದ ಸಾಧ್ಯವಾ
ಈ ಮೂವರಿಗೂ ಅವರವರ ಕಾಲದಲ್ಲಿ ನಿಸ್ಸೀಮ ಕಲಿಗಳಾದ ಶತ್ರು
ಗಂಟು ಬಿದ್ದಿದ್ದರು. ಪುಲಿಕೇಶಿಗೆ ಇದಿರಾಳಾದ ನರಸಿಂಹವರ್ಮ
ರಣರಂಗ ಧೀರನೊಡನೆ ಹೋರಾಡಬೇಕಾಯಿತು; ಮೂರ
ಗೋವಿಂದನಿಗೆ ಶಿವಮಾರನಂತಹ ಸುಭಟನೊಡನೆ ಸೆಣಸಾಡಬೇ
ಯಿತು; ಅದೇ ಮೇರೆಗೆ ಈ ಕುಂತಳೋರ್ವೀಶನ ಕಾಲದಲ್ಲಿ ಕ
ದಿಂದಲೂ ಎದೆಗಾರಿಕೆಯಿಂದಲೂ ಚತುರತೆಯಿಂದಲೂ ಉತ್ತುಂಗನಾ
ಕುಲೋತ್ತುಂಗನೆಂಬ ಚೋಳರಸನನ್ನು ಇದುರಿಸುವ ಪ್ರಸಂಗ ಬಂ
ಈ ರೀತಿಯಾಗಿ ಈ ಮೂವರೂ ಕರ್ನಾಟಕ ಪೃಥ್ವೀಶರಲ್ಲಿ ಅಗ್ರಾ
ಸೀನರಾಗಿರುವರು.

ವಿಕ್ರಮಾಭರಣನ ಬಾಲ್ಯಯೌವನಾವಸ್ಥೆಗಳ ೩೫–೪೦ ವ
ಗಳೆಂದರೆ ಕದನಗಳ ಸುಗ್ಗಿ. ಚೋಳರಿಗೂ ಚಾಳುಕ್ಯರಿಗೂ ಇರುವ
ತನವು ಆ ಅವಧಿಯಲ್ಲಿ ಬೆಳೆದು ಬಲಿದು ಫಲಿಸಿ ನಿಲವು ನಿಂತಿತ್ತು. ದಕ್ಷಿ
ದಿಂದ ಮೇಲಕ್ಕೊತ್ತಿ ಬರುವ ಚೋಳರ ಕಲಿಮೇಳವನ್ನು ಕ
ಕೈಗೊಟ್ಟು ತರುಬುವುದೆ ವಿಕ್ರಮನ ತಂದೆಯ ಆಯುಷ್ಯದ ಮು
ಇತಿ ಕರ್ತವ್ಯತೆಯಾಗಿತ್ತು. ಸೋಮೇಶ್ವರನು ಚೋಳರ ಹಾವಳಿಯ
ಹಿಂಗಿಸುವುದಕ್ಕೆ ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವ
ಸೀಮಾಂತ ಪ್ರದೇಶದಲ್ಲಿ ಮೂರು ಭಾಗಗಳನ್ನು ಮಾಡಿದ್ದನು; ಒಂದೊ
ದಕ್ಕೆ ತನ್ನ ಒಬ್ಬೊಬ್ಬ ಮಗನನ್ನು ದಂಡನಾಯಕನನ್ನಾಗಿ ನಿಯಮಿ
ದ್ದನು. ಇದರಿಂದ ಚೋಳ ಚಾಳುಕ್ಯ ಸಾಮ್ರಾಜ್ಯಗಳ ನಡುವೆ ಬಹು
ಅಭೇದ್ಯವಾದ ಗೋಡೆಯನ್ನೇ ಕಟ್ಟಿದಂತಾಗಿತ್ತು. ಚರಿತ್ರನಾಯಕನಾ
ವಿಕ್ರಮಾರ್ಣವನನ್ನು ನೊಳಂಬವಾಡಿಯ (ಚಿತ್ರದುರ್ಗ ಮುಂತಾ
ಪ್ರದೇಶ) ಅಧಿನಾಯಕನನ್ನಾಗಿ ನಿಯಮಿಸಿದ್ದನು. ಚೋಳರ ರೋ

ದೃಷ್ಟಿಯು ಈ ನಾಡಿನ ಮೇಲೆಯೇ ಬೀಳುತ್ತಿತ್ತು. ಈ ಮೂಲಕವಾಗಿ ವಿಕ್ರಮನಿಗೆ ಚಿಕ್ಕಂದಿನಲ್ಲಿಯೇ ರಣರಂಗದ ಅನುಭವವು ಲಭಿಸಿತು. ಚೋಳರಾಜಾಧಿರಾಜನಿಗೂ ಸೋಮೇಶ್ವರನಿಗೂ ತುಂಗಭದ್ರಾತೀರದ ಕೊಪ್ಪದಲ್ಲಿ ಅತ್ಯುಗ್ರಸಂಗ್ರಾಮವೆಸಗಿತು. ಇದರಲ್ಲಿ ವಿಕ್ರಮನೂ ತಂದೆಯೊಂದಿಗೆ ಸಮರದೇವತೆಯ ಪೂಜೆಗೆ ತನ್ನ ಕೃಪಾಣಧಾರೆಯ ಜಲವನ್ನು ಎರೆದನು. ಇವರಿಬ್ಬರ ವಿಕ್ರಮತೀರ್ಥಾಭಿಷೇಕದಿಂದ ಭಯಂಕರ ರೂಪಿಣಿಯಾದ ಆ ರಣದೇವತೆಯ ಅಡಿಗಳಲ್ಲಿ ರಾಜಾಧಿರಾಜನು ಎರಗಿ ಪ್ರಾಣ ಕೊಟ್ಟನು. ಆ ಬಳಿಕ ಚೋಳಕ್ಷೋಣಿಗೆ ಒಡೆಯನಾದವನು ರಾಜಾಧಿರಾಜನ ತಮ್ಮ ರಾಜೇಂದ್ರ. ಈ ವೀರಾಗ್ರೇಸರನಿಗೂ ಸೋಮೇಶ್ವರನಿಗೂ ಇರಿದಾಟವಾದಾಗಳೆಲ್ಲ ವಿಕ್ರಮದೇವನೇ ಬಹುಶಃ ಕದನದ ಧುರೀಣತ್ವವನ್ನು ವಹಿಸಿದ್ದನು. ಚೋಳಚಾಳುಕ್ಯರ ವೈರವು ಇಷ್ಟರಿಂದಲೇ ಕೊನೆಮುಟ್ಟಲಿಲ್ಲ. ರಾಜೇಂದ್ರನ ತರುವಾಯ ೧೦೬೩ರಲ್ಲಿ ಚೋಳಸಿಂಹಾಸನಾಧೀಶ್ವರನಾದ ಭೀಮಪರಾಕ್ರಮಿ ವೀರರಾಜೇಂದ್ರನೂ ಈ ಹಗೆತನದ ಕುಸನನ್ನು ಬಿಡಲಿಲ್ಲ. ಆತನು ಐದು ಸಾರಿ ಚಾಲುಕ್ಯರ ಮೇಲೆ ಬಲವೆತ್ತಿ ಬಂದನು. ಸಮಬಲರಾದ ಮಹಾಬಲಿಗಳಲ್ಲಾದ ಆ ಭೀಕರಸಂಗರಗಳಲ್ಲಿ ವಿಕ್ರಮನೇ ಮುಖಂಡ. ಆತನು ಅರಿನೃಪಾಲರನ್ನು ನುಂಗುವ ಕಾಲಮೃತ್ಯುವಿನಂತೆಯೂ ಆಹವದೆಡೆಗೆ ಬೀಸುವ ಸಂಜೆಯ ಬಿರುಗಾಳಿಯಂತೆಯೂ ಚೋಳರನ್ನು ಬೆಂಕೊಂಡು ತಿರುತಿರುವಿ ಕೆಡಹಿದನು. ಒಂದೆರಡರಲ್ಲಿ ಚಾಳುಕ್ಯರು ಗೆದ್ದರು; ಒಂದೆರಡರಲ್ಲಿ ಚೋಳರಿಗೆ ಜಯವು ಸಿಕ್ಕಿತು.

ಕೊನೆಗೆ ಸೋಮೇಶ್ವರನು ತನ್ನ ಕೈಬರಹದಿಂದ ವೀರರಾಜೇಂದ್ರನಿಗೆ ಯುದ್ಧದ ಆಹ್ವಾನಪತ್ರಿಕೆಯನ್ನು ಕಳುಹಿಸಿದನು. ಕೃಷ್ಣಾ ತುಂಗಭದ್ರೆಗಳು ಒಂದನ್ನೊಂದು ಅಪ್ಪಿಕೊಂಡಿರುವ ಕೂಡಲ ಸಂಗಮವು ರಣಕ್ಷೇತ್ರವೆಂದು ಅದರಲ್ಲಿ ಸೂಚಿಸಿದ್ದನು. ವೀರರಾಜೇಂದ್ರನು ಪಡೆಗೊಂಡು ನಡೆತಂದನು. ಕೂಡಲಸಂಗಮದಲ್ಲಿ ಒಂದು ತಿಂಗಳವರೆಗೆ ಎದುರಾಳಿಯ

ಹಾದಿಯನ್ನು ಕಾಯ್ದನು. ಆದರೆ ತೀಕ್ಷ್ಣಜ್ವರಬಾಧೆಯಿಂದ ಸೋ
ಶ್ವರನಿಗೆ ಬರಲಿಕ್ಕಾಗಲಿಲ್ಲ. ಆತನು ಯುದ್ಧ ಭೂಮಿಯಲ್ಲಿ ಕುಣಿದಾ
ಬದಲು ತುಂಗಭದ್ರೆಯ ತೊಡೆಯಲ್ಲಿ ಚಿರವಿಶ್ರಾಂತಿಯನ್ನು ಹೊ
ದ್ದನು. ಚೋಳನು ಇನ್ನು ಮರಳುವವನಿದ್ದನು. ಅಷ್ಟರಲ್ಲಿ ತು
ಸೇನಾರಥವನ್ನು ನಡೆಯಿಸಿಕೊಂಡು ವಿಕ್ರಮಾದಿತ್ಯನು ಬಂದನು. ಉ
ದಂಡುಗಳು ಒಂದನ್ನೊಂದು ಎರಗಿ, ಕೆನ್ನೀರಿನ ಹೊಳೆ ಹರಿಯ
ದಿತ್ತು. ವಿಕ್ರಮನು ಚೋಳ ಸೈನ್ಯವನ್ನು ಕಲಕುವವನಿದ್ದನು. ವೀ
ರಾಜೇಂದ್ರನು ಚಾಳುಕ್ಯರ ದಂಡಿನ ದೂಳ ಹಾರಿಸುವವನಿದ್ದನು.
ಪ್ರದೇಶವೆಲ್ಲ ಪೆಣಮಯವಾಗುವುದಿತ್ತು. ದೈವಲೀಲೆಯನ್ನು ನೋ
ಒಮ್ಮೆಲೆ ಯುದ್ಧದೃಶ್ಯವು ಹೋಗಿ, ಅದರ ಬದಲು ಅಲ್ಲಿ ವಿವಾಹ
ವಾಯಿತು; ರಣಮಂಟಪವು ಲಗ್ನಮಂಟಪವಾಯಿತು; ಒಬ್ಬರನ್ನೊಬ್ಬ
ತೆಕ್ಕೆ ಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿ
ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವ
ಸೂರೆಗೊಂಡರು. ವೀರರಾಜೇಂದ್ರನ ಗೋಣ್ಮುರಿಯಲು ಚಾಚಿದ್ದ ವಿ
ಮನ ಕೈಯು ಅವನ ಮಗಳ ಪಾಣಿಗ್ರಹಣವನ್ನು ಮಾಡಿತು! ಹೀ
ಗುವುದಕ್ಕೆ ಆಗಿನ ಕಾಲದ ರಾಜಕಾರಣದ ವಿಲಕ್ಷಣ ಪರಿಸ್ಥಿತಿ
ಕಾರಣವಾಗಿತ್ತು.

ಆಗಿನ ಕಾಲದಲ್ಲಿ ಚೋಳರಾಜ್ಯದಲ್ಲಿಯೂ ಕ್ರಾಂತಿ ನಡೆದಿತ್ತು;
ಚಾಳುಕ್ಯ ರಾಜ್ಯದಲ್ಲಿಯೂ ಕ್ರಾಂತಿ ನಡೆದಿತ್ತು; ವೆಂಗಿರಾಜ್ಯದಲ್ಲಿಯೂ
ಕ್ರಾಂತಿ ನಡೆದಿತ್ತು. ಚೋಳರಸನ ಮಗಳ ಮಗನಾದ ರಾಜೇಂದ್ರದೇ
ಅಥವಾ ಕುಲೋತ್ತುಂಗನು ಚೋಳರಾಜ್ಯದಲ್ಲಿ ತನ್ನ ಬೆಳಕನ್ನು ಕೆ
ಬೇಕೆಂದಿದ್ದನು. ಆತನು ವೆಂಗಿಯ ಚಾಳುಕ್ಯವಂಶಜನು. ಆದರೆ ತಾಯಿಯ
ತೌರುಮನೆಯಾದ ಚೋಳರಲ್ಲಿಯೆ ಬೆಳೆದಿದ್ದನು. ಆತನು ಉತ್ಕ
ಮಹತ್ವಾಕಾಂಕ್ಷಿ. ಕೇವಲ ವೆಂಗಿಯನ್ನಾಳುವುದು ಆತನ ಮನಸ್ಸಿನಲ್ಲಿ
ಲ್ಲಿಲ್ಲ. ತನ್ನ ಅಜ್ಜನ ಚೋಳ ಮಹಾಸಾಮ್ರಾಜ್ಯಕ್ಕೂ ಚಕ್ರವರ್ತಿಯಾ
ಬೇಕೆಂದು ಆತನ ಹವಣಿಕೆ. ವೀರರಾಜೇಂದ್ರನು ವೆಂಗಿಯನ್ನು ತ

ಅಂಕಿತದಲ್ಲಿಟ್ಟುಕೊಂಡು ತನ್ನ ವಿಶ್ವಾಸದ ಮಾಂಡಲಿಕನನ್ನು ಅಲ್ಲಿ ನಿಯ ಮಿಸಬೇಕೆಂದಿದ್ದನು. ಅರ್ಥಾತ್ ಉತ್ತುಂಗಸಾಹಸಿಯಾದ ಕುಲೋ ತ್ತುಂಗನನ್ನು ವೆಂಗಿಯ ಪಟ್ಟದಲ್ಲಿರಿಸುವುದು ಆತನಿಗೆ ಬೇಡಾಗಿತ್ತು. ಅಂತು ವೆಂಗಿ ರಾಜ್ಯವನ್ನು ನುಂಗಬೇಕೆಂದು ಆತನ ಹೊಂಚು. ಇತ್ತ ವಿಕ್ರಮನ ತಂದೆಯು ತೀರಿದೊಡನೆಯೆ ಅಣ್ಣನಾದ ಎರಡನೆಯ ಸೋಮೇಶ್ವರನು ಕಲ್ಯಾಣದಲ್ಲಿ ಸಿಂಹಾಸನಾರೂಢನಾದನು. ಆದರೆ ಆತನು ಲೋಕಪ್ರಿಯನಾಗಿ ಅರಸುಗೈಯುತ್ತಿರಲಿಲ್ಲ. ಪ್ರಜೆಗಳಿಗೂ ಮಾಂಡಲಿಕರಿಗೂ ವಿಕ್ರಮನ ಒಡೆತನವು ಬೇಕಾಗಿತ್ತು. ಅಲ್ಲದೆ ವಿಕ್ರಮನ ಪರಾಕ್ರಮಕ್ಕೆ ಅಳುಕಿ ಸೋಮೇಶ್ವರನು ಹೊಟ್ಟೆಕಿಚ್ಚು ಪಡುತ್ತಿದ್ದನು. ಈ ಎಲ್ಲಾ ಕಾರಣಗಳಿಂದ ಅಣ್ಣನನ್ನು ಸರಿಸಿ ತಾನು ಚಾಳುಕ್ಯ ಸಮ್ರಾಟನಾಗಬೇಕೆಂದು ವಿಕ್ರಮನ ಎಣಿಕೆ. ಹೀಗೆ ಚೋಳ, ವೆಂಗಿ, ಮತ್ತು ಚಾಳುಕ್ಯ ಈ ಮೂರು ರಾಜ್ಯಗಳಲ್ಲಿ ಒಳಗಿಂದೊಳಗೆ ರಾಜಕಾರಣದ ತಂತ್ರಗಳು ನಡೆದಿದ್ದವು. ಒಬ್ಬರ ಸಹಾಯವನ್ನೊಬ್ಬರು ಅಪೇಕ್ಷಿಸುತ್ತಿದ್ದರು. ಕುಲೋತ್ತುಂಗನು ವೀರರಾಜೇಂದ್ರನ ಸಿರಿಯ ನ್ನಪಹರಿಸುವುದಕ್ಕೆ ಚಾಳುಕ್ಯೇಂದ್ರನಾದ ಸೋಮೇಶ್ವರನನ್ನು ಕೂಡಿ ದುದು ಸಹಜವಾದ ಮಾತು. ಏಕೆಂದರೆ 'ಇಬ್ಬರ ನ್ಯಾಯ ಮೂರನೆ ಯವನಿಗೆ ಆಯ' ಎಂಬ ಹಾಗೆ ಚೋಳ ಚಾಳುಕ್ಯರ ವ್ಯಾಜ್ಯದಲ್ಲಿ ಕುಲೋತ್ತುಂಗನು ತನ್ನ ಮನೋರಥವನ್ನು ಸಿದ್ಧಿಗೊಯ್ಯಬಯಸಿದನು. ಸೋಮೇಶ್ವರನಾದರೂ ತಮ್ಮನ ಆಟವನ್ನೂ ಚೋಳನ ಕಾಟವನ್ನೂ ಅಡಗಿಸುವುದಕ್ಕೆ ಅನುಕೂಲವಾಗಿದ್ದ ಈ ಸಂಧಿಯನ್ನು ಕಳೆದುಕೊಳ್ಳ ಲಿಲ್ಲ; ಕುಲೋತ್ತುಂಗನ ಮೈತ್ರಿಗೆ ಒಪ್ಪಿಕೊಂಡನು. ಇನ್ನುಳಿದ ವಿಕ್ರಮ ವೀರರಾಜೇಂದ್ರರಿಗೆ ಒಬ್ಬರಿಗೊಬ್ಬರ ನೆರವೇ ಗತಿಯಾಯಿತು. ಗೃಹ ವೈರಿಯಾದ ಕುಲೋತ್ತುಂಗನು ಸೋಮೇಶ್ವರನನ್ನು ಕೂಡಿಕೊಂಡು ದುದರಿಂದ ವೀರರಾಜೇಂದ್ರನು ವಿಕ್ರಮನೊಡನೆ ಗೆಳೆತನವನ್ನು ಇಚ್ಛೆ ಸಿದನು. ಕುಲೋತ್ತುಂಗನ ಸಂಗಮದಿಂದ ಪ್ರಬಲನಾದ ಅಣ್ಣನಿಗೆ ಉಚ್ಚಾಟಣೆ ಕೊಡುವುದಕ್ಕೆ ವಿಕ್ರಮನು ಚೋಳನ ನೆರವನ್ನು

ಕ್ಕೊಂಡನು. ಹೀಗೆ ಇಬ್ಬರಲ್ಲಿಯೂ ಕಾದಾಟದ ವಿಚಾರಗಳಳಿದ್ದ
ಆದುದರಿಂದಲೇ ಒಮ್ಮೆಲೆ ಯುದ್ಧ ನಿಂತುಹೋಯಿತು. ವಿಕ್ರಮನು ಪ್ರ
ಕ್ರಮದಿಂದ ಈ ಮೊದಲೇ ವೀರರಾಜೇಂದ್ರನನ್ನು ಮೆಚ್ಚಿಸಿದ್ದನಾ
ರಿಂದ ಆಳಿಯನಾದನು. ಈ ನೆಂಟತನದಿಂದ ಇಬ್ಬರೂ ಒಂದಾದರು. ಈ
ಯಾಗಿ ನಾಲ್ಕು ವೀರಪಂಗಡಗಳು ಒಂದನ್ನೊಂದು ಸೇರಿ ಎರಡಾ
ಚೋಳ ವೈರಿಯಾದ ಸೋಮೇಶ್ವರನನ್ನು ಕುಲೋತ್ತುಂಗನೂ ಚಾ
ವಿರೋಧಿಯಾದ ವೀರರಾಜೇಂದ್ರನನ್ನು ವಿಕ್ರಮನೂ ಕೂಡಿಕೊ
ವಿಲಕ್ಷಣವಾದ ಇತ್ತಂಡಗಳೇರ್ಪಟ್ಟವು.

ವೀರರಾಜೇಂದ್ರನೊಡನೆ ವಿಕ್ರಮನ ಶರೀರಸಂಬಂಧವಾ
ನೆಯೆ ಇಬ್ಬರೂ ವೆಂಗಿದೇಶಕ್ಕೆ ಹೋದರು. ಅಲ್ಲಿಯ ರಾಜ್ಯಕಾರಭಾ
ಕ್ರಾಂತಿಯನ್ನು ಮಾಡಿದರು. ಆ ರಾಜ್ಯಕ್ಕೆ ಕುಲೋತ್ತುಂಗನ ಕಕ್ಕ
ವಿಜಯಾದಿತ್ಯನನ್ನು ಅಧಿರಾಜನನ್ನಾಗಿ ಮಾಡಿ ಮರಳಿ ಬಂದರು.
ಈ ವಿಜಯವು ಅವರಿಗೆ ದಕ್ಕಲಿಲ್ಲ. ಏಕೆಂದರೆ ಮುಂದೆ ತುಸು ದಿನ
ವೀರರಾಜೇಂದ್ರನು ಮರಣ ಹೊಂದಿದನು; ಒಡನೆಯೆ ಚೋಳ
ದಲ್ಲಿಯೂ ರಾಜ್ಯಕ್ರಾಂತಿಗೆ ಆರಂಭವಾಯಿತು. ಆಗ ವಿಕ್ರಮನು ದಕ್ಷಿ
ದೇಶದಲ್ಲಿಯ ಚಾಳುಕ್ಯ ಮಾಂಡಲೀಕರನ್ನು ತನ್ನ ಕಡೆಗೆ ಒಲಿಸಿಕೊ
ವುದರಲ್ಲಿ ತೊಡಗಿದ್ದನು. ಮಾವನ ಮರಣವನ್ನು ಕೇಳಿದೊಡನೆ
ಹಿಡಿದ ಕೆಲಸವನ್ನು ಬಿಟ್ಟು ಆತನು ಕಂಚಿಗೆ ಹೋದನು. ಅಲ್ಲಿಯ ರಾ
ವ್ಯವಸ್ಥೆಯನ್ನು ಸರಿಪಡಿಸಿ ವಿಕ್ರಮನು ತನ್ನ ಬೀಗನನ್ನು ಪಟ್ಟ
ಕುಳ್ಳಿರಿಸಿ ತನ್ನ ಕಾರ್ಯಕ್ಕೆ ಹಿಂತಿರುಗಿದನು. ಆದರೆ ದೈವವು ವಿಕ್ರಮ
ಆಗ ಅನುಕೂಲವಾಗಿರಲಿಲ್ಲ. ಚೋಳರಾಜ್ಯ ಕ್ರಾಂತಿಯಲ್ಲಿ ಆತನ ಬೀಗ
ಮೃತನಾದನು. ಕುಲೋತ್ತುಂಗನಿಗೆ ತಾನಾಗಿ ಹೊತ್ತು ಸಾಧಿಸಿ
ಆತನು ಅನಾಯಾಸವಾಗಿ ಚೋಳಸಿಂಹಾಸನವನ್ನಾಕ್ರಮಿಸಿದನು.
ವಿಕ್ರಮನು ಚೋಳರಾಜ್ಯದ ಆಸೆಯನ್ನು ಬಿಟ್ಟುಕೊಟ್ಟು ತನ್ನ ಮುಖ್ಯೋ
ದ್ದೇಶವಾದ ಚಾಳುಕ್ಯ ಸಾಮ್ರಾಜ್ಯ ಸಂಪಾದನೆಯ ಕಡೆಗೆ ಪ್ರಯತ್ನವ
ಹೊರಳಿಸಿದನು. ಈಗ ಮಾತ್ರ ಅವನಿಗೆ ಅನುಕೂಲಗಾಳಿ ಬೀಸಿ

ಸೋಮೇಶ್ವರನ ಆಳಿಕೆಯಿಂದ ಜನರು ಬೇಸತ್ತಿದ್ದರು. ವಿಕ್ರಮನೇನೋ ಆತನಿಗೆ ಅಣ್ಣನೆಂದು ಮಾನಕೊಡುತ್ತಿದ್ದನು. ಆದರೆ ಜನರು ಹಾಗೆ ವರ್ತಿಸಲಿಕ್ಕೆ ಸಿದ್ಧರಿರಲಿಲ್ಲ. ಮಾಂಡಲಿಕರಾಯರ ಪ್ರೇಮವೂ ವಿಕ್ರಮನ ಮೇಲೆ ವಿಶೇಷವಾಗಿತ್ತು. ಆತನ ತಮ್ಮನಾದ ಜಯಸಿಂಹನೂ ವಿಕ್ರಮನ ಕಡೆಗೆಯೆ ಇದ್ದನು. ಹೀಗೆ ಸರ್ವವಿಧದಿಂದಲೂ ವಿಕ್ರಮನ ದೈವವು ತೆರೆಯಿತು. ಜನರಿಗೆ ಬೇಡಾದವರು ಎಷ್ಟು ದಿವಸ ಅರಸೊತ್ತಿಗೆಯಲ್ಲಿ ಮೆರೆಯಬಲ್ಲರು? ಸೋಮೇಶ್ವರನಿಗೆ ತನ್ನ ರಾಜ್ಯದಲ್ಲಿಯೇ ಎಲ್ಲಿಯೂ ಆಶ್ರಯ ದೊರೆಯಲಿಲ್ಲ. ವಿಕ್ರಮನ ಶತ್ರುವಾದ ಕುಲೋತ್ತುಂಗನೊಡನೆ ಸೇರಿಕೊಂಡು ಸೋಮೇಶ್ವರನು ತನ್ನ ತಮ್ಮನನ್ನು ಹಣಿಯುವ ಒಳ ಸಂಚನ್ನು ಮಾಡಿದನು. ರಾಜಧಾನಿಯಲ್ಲಿದ್ದರೆ ಕೇಡು ಸಂಭವಿಸಬಹು ದೆಂದು ವಿಕ್ರಮನು ಜಯಸಿಂಹನೊಡನೆ ಕಲ್ಯಾಣವನ್ನು ಬಿಟ್ಟು ತೆರಳಿದನು. ಅವರನ್ನು ಕಟ್ಟಿತರುವುದಕ್ಕೆ ಸೋಮೇಶ್ವರನು ಸೈನ್ಯವನ್ನಟ್ಟಿದನು. ಆ ವೀರ ಬಂಧುಗಳು ಅದನ್ನು ಕ್ಷಣಾರ್ಧದಲ್ಲಿ ತೋಳಕಸುವಿನಿಂದ ಗರಗರನೆ ಅರೆದಿಕ್ಕಿದರು. ಅವರುರುಬೆಗೆ ಸೈನಿಕರು ಉಳಿದುಳಿದು ಬನ್ನಬಟ್ಟು ದಿಕ್ಕೆಟ್ಟು ಓಡಿದರು. ವಿಕ್ರಮನಿಗೆ ಸಾಮಂತರೆಲ್ಲರ ಬೆಂಬಲವಿದ್ದುದರಿಂದ ಸೋಮೇ ಶ್ವರನಿಂದ ಆತನನ್ನು ಹಿಡಿಯುವುದಾಗಲಿಲ್ಲ. ಅಷ್ಟರಲ್ಲಿ ವಿಕ್ರಮನು ದೊಡ್ಡದೊಂದು ಬಲವನ್ನು ಕೂಡಿಸಿ ತುಂಗಭದ್ರೆಯ ದಂಡೆಯಲ್ಲಿ ತಳ ಊರಿದನು. ಮಹಾ ವಾಹಿನಿಸಮೇತನಾಗಿ ಕುಲೋತ್ತುಂಗನು ದಕ್ಷಿಣ ದಿಂದ ಏರಿಬಂದನು. ಅಸಂಖ್ಯಾನೀಕದಿಂದ ಪರಿವೃತನಾಗಿ ಸೋಮೇ ಶ್ವರನು ಉತ್ತರದಿಂದ ಮೇಲೆ ಬಿದ್ದನು; ಹೀಗೆ ವಿಕ್ರಮನು ಕತ್ತರಿಯ ಬಾಯಿಗೆ ಸಿಕ್ಕನು. ಇಬ್ಬರ ಚಕ್ರಗಳನ್ನೂ ಒಮ್ಮೆಲೆ ಕತ್ತರಿಸಿ ಗೆದ್ದು ಪಾರಾಗುವುದು ಹೇಗೆಂಬ ವಿಚಾರಕ್ಕೂ ಆಗ ಅವಕಾಶವಿರಲಿಲ್ಲ. ಕತ್ತರಿಯ ಎರಡೂ ಅಲಗುಗಳು ವಿಕ್ರಮನ ಮೇಲೆ ಒತ್ತರಿಸಿಬಂದಿದ್ದುವು. ಇಂತಹ ಇರುಕಿನಲ್ಲಿ ಸಿಕ್ಕರೂ ಆ ಧೀರ ವಿಕ್ರಮನು ತಿಲಮಾತ್ರವೂ ಎದೆಗೆಡಲಿಲ್ಲ. ನಿಶ್ಶಂಕ ಪ್ರತಾಪನಾದ ಆತನು ಎರಡಕ್ಕೂ ಎದೆಗೊಟ್ಟು ನಿಲ್ಲಲು ಸಿದ್ಧ ನಾದನು.

ವಿಕ್ರಮನು ಮೊದಲು ಕುಲೋತ್ತುಂಗನ ಸೈನ್ಯ ಶರಧಿಗೆ ಧು
ಜಿಗಿದನು. ಕುಲೋತ್ತುಂಗನ ಸುಭಟರು ಈತನನ್ನು ಮುಳು
ಒಟ್ಟಾಗಿ ಎಡೆಎಡದೆ ತೆರೆಗಳಂತೆ ಹಾಯ್ದರು. ವಿಕ್ರಮನ ನಿಸಿತಖ
ಒಂದೊಂದೆ ಆಪೋಶನಕ್ಕೆ ಅವುಗಳನ್ನೆಲ್ಲ ಈಂಟಿತು. ಎರಡೂ ಸೇ
ಒಂದನ್ನೊಂದು ಹೊಕ್ಕು ಹೆಣೆದುಕೊಂಡು ಹೋರಾಡಿದುವು.
ಮನು ತೊಡಕುಗಳನ್ನು ಕಡಿಕಡಿದು ಕುಲೋತ್ತುಂಗನ ಬಳಿ
ಗರ್ಜಿಸಿದನು. ಇಬ್ಬರ ವೀರಾವೇಶವೂ ಹೆಚ್ಚಿತು. ಅವರು ರಥ
ಕಾದಿದರು. ಒಮ್ಮೆ ನಿಂದು ಕಾದಿದರು, ಒಮ್ಮೆ ಐತಂದು ಕೈದುಕ
ಗಳಿಂದ ಕಾದಿದರು; ಒಮ್ಮೆ ಹೊಸ ಕುದುರೆಗಳನ್ನೇರಿ ಬಂದು ಕಾ
ಒಮ್ಮೆ ತಮತಮಗೆ ಒದಗಿದ ಎಡಬಲದ ಪಡಿಬಲವನ್ನು ಕೊಂದು ಕಾ
ದರು; ಒಮ್ಮೆ ಖಡ್ಗಖಡ್ಗಗಳ ಹತಿಯಿಂದ ನೊಂದು ಕಾದಿದರು; ಎ
ಚಳಚಳಿಕೆಯಿಂದ ಸಲೆಸಂದು ಕಾದಿದರು. ಬವರವಿಬ್ಬರಿಗೂ ಸಮ
ದನ್ನು ಕಂಡು ವಿಕ್ರಮನ ಕೋಪವು ದ್ವಿಗುಣಿತವಾಯಿತು. ಆ
ವಿೀರಿದ ಪರಾಕ್ರಮದಿಂದ ಕುಲೋತ್ತುಂಗನ ಧ್ವಜಚ್ಛತ್ರಚಾ
ಗಳನ್ನೂ ಚತುರಂಗ ಸೇನೆಯನ್ನೂ ಸವರಿ ಕೈದುಗಳನ್ನು ಕ
ವ್ಮೈಯನ್ನೂ ಇರಿದು ನೋಯಿಸಿದನು. ಕುಲೋತ್ತುಂಗನು ಪ
ಹೊಂದಿ ಕಂಚಿಯವರೆಗೆ ಒಂದೇ ಉಸುರಿನಿಂದ ಓಡಬೇಕಾಯಿ
ಕೂಡಲೆ ವಿಕ್ರಮನು ಹೊಡೆ ಮರಳಿ ಸೋಮೇಶ್ವರನ ಸೇನಾ
ವನ್ನು ಒಳನುಗ್ಗಿದನು. ಸೋಮೇಶ್ವರನ ದಂಡು ಈತನ ಮೇಲೆ
ಜಂತುಗಳಂತೆ ಅವಗಡಿಸಿ ಮುತ್ತಿ ಬಂದಿತು. ವಿಕ್ರಮನ ಕೋ
ಟೋಪವು ಕಾಳ್ಕಿಚ್ಚಿನಂತೆ ಭುಗಿಭುಗಿಲೆಂದು ಅವರೆಲ್ಲರನ್ನು ಸುಡ
ಗಿತು. ಅವನಿವನ ಪಡೆವಳರು ಮಸೆವೆತ್ತ ಕೂರ್ಗತ್ತಿಗಳನ್ನು ತೆಗೆ
ಹೊಡೆದಾಡಿದರು. ತನಿವೀರರಸದ ಪ್ರವಾಹವು ಮೇಲುಕ್ಕಿ ಹರಿಯಿ
ಎಂಬಂತೆ ನೆತ್ತರು ಸುರಿಯಿತು. ಇತ್ತಂಡದ ಪಟುಭಟರು ಒಬ್ಬ
ಬ್ಬರು ಒತ್ತೊತ್ತಿ ಹೊಡೆದರು; ಒಬ್ಬರೊಬ್ಬರ ಅಸಿಗಳನ್ನು ಅಸಿಗ
ಕತ್ತರಿಸಿದರು; ಒಬ್ಬರೊಬ್ಬರಲ್ಲಿ ನಾಟಿಸಿದ ಆಯುಧಗಳನ್ನು ಕಿತ್ತಿ

ಒಬ್ಬರಿಂದೊಬ್ಬರು ಗಾಯವಡೆದು ಬಸಳಿಗೊಂಡು ಮತ್ತೆ ಚೇತರಿಸಿ ಕೊಂಡು ಕೈಗೆಡದೆ ಜಡಿದು ಬೊಬ್ಬಿಟ್ಟರು. ಹೀಗೆ ಆ ಸಮರಧುರಂಧರ ರಿಬ್ಬರ ಪಡೆಗಳ ಅಗ್ಗಳಿಕೆಯಿಂದ ಆ ಹುಯ್ಯಲು ಭೀಕರವಾಯಿತು. ವಿಕ್ರ ಮನು, ಚಂಡಕಿರಣನ ತೇಜಕ್ಕಿಂತಲೂ ಉಗ್ರವಾದ ಪರಾಕ್ರಮದಿಂದ ಪರಸೈನ್ಯವನ್ನು ಪೆರಗಿಕ್ಕಿ ಎಡೆಗೊಡದಟ್ಟಿ ಕೊಂದನು. ಈ ಆರಾತಿಸಂಹಾ ರಲಯಾಗ್ನಿಯನ್ನು ಸೋಮೇಶ್ವರನಂತಹ ಪ್ರತಾಪಸಮುದ್ರನಿಂದಲೂ ನಂದಿಸುವುದಾಗಲಿಲ್ಲ. ಸೋಮೇಶ್ವರನ ಅಧರ್ಮಕ್ಕೆ ಮುನಿದು ಯಮ ಧರ್ಮನೇ ದಂಡವನ್ನೆತ್ತಿ ಬಂದನೋ ಎಂಬಂತೆ ವಿಕ್ರಮಾದಿತ್ಯನ ಆಹವ ಪ್ರೌಢಿಯು ಮೆರೆಯಿತು. ಸೋಮೇಶ್ವರನ ಕೈತವಕವು ಕುಂದಿತು. ವಿಕ್ರಮನು ಆತನನ್ನು ಸೆರೆಹಿಡಿದನು. ಹೀಗೆ ೨೫–೩೦ ವರುಷ ನಿರಂತರ ವಾಗಿ ಶೌರ್ಯವನ್ನು ತೋರಿಸಿ, ಮಲೆಪರ ಪೊಂಗನ್ನು ಅಡಗಿಸಿ, ಮನ್ನೆ ಯರ ಉರ್ಕನ್ನು ಕಳಚಿ, ಅನ್ಯಮಂಡಳಿಕರ ದರ್ಪವನ್ನು ಓಗಡಿಸಿ ತ್ರಿಭು ವನ ಮಲ್ಲನಾಗಿ ಕಲ್ಯಾಣದಲ್ಲಿ ಚಾಳುಕ್ಯ ಸಿಂಹಾಸನವನ್ನೇರಿದನು (೧೦೭೬). ತಮ್ಮನಾದ ಜಯಸಿಂಹನನ್ನು ಬನವಾಸಿ ಪ್ರಾಂತಕ್ಕೆ ನಿಯ ಮಿಸಿದನು.

ಇಷ್ಟರಲ್ಲಿ ವಿಕ್ರಮಾದಿತ್ಯನ ಕೀರ್ತಿಯು ದಿಗ್ದೇಶಗಳನ್ನು ವ್ಯಾಪಿ ಸಿತ್ತು. ಆತನನ್ನು ಇದಿರಾಗುವವರು ಯಾರೂ ಉಳಿಯಲಿಲ್ಲ. ಚಾಳುಕ್ಯ ಸಾಮ್ರಾಜ್ಯದೊಳಗಿನ ಮಾಂಡಲಿಕರೆಲ್ಲರೂ ಆತನ ಒಡೆತನವನ್ನು ಆನಂದ ದಿಂದ ಮನ್ನಿಸಿದರು. ದೇವಗಿರಿಯ ಯಾದವರೂ ಹಾನಗಲ್ಲು ಗೋವೆ ಹಲಸಿಗಿಗಳ ಕದಂಬರೂ ಸವದತ್ತಿ ಬೆಳಗಾವಿಗಳ ರಟ್ಟರೂ ಉತ್ತರ ದಕ್ಷಿಣ ಕೊಂಕಣಗಳ ಶಿಲಾಹಾರರೂ ಹೊಯ್ಸಳರೂ ಮುಂತಾದ ಸಾಮಂತ ರಾಜರೆಲ್ಲರೂ ವಿಕ್ರಮದೇವನೇ ತಮ್ಮ ಚಕ್ರವರ್ತಿಯೆಂದು ಜಯಜಯಕಾರವನ್ನು ಮಾಡಿದರು. ವಿಕ್ರಮನು ಸಕಲ ವಿಬುಧಜನ ಸಂಸ್ತುತನಾದನು. ನಿಖಿಲ ಪ್ರಜಾಹ್ಲಾದಕರನಾದನು. ಇಂತು ಅಖಂಡ ಕುಂತಳಭೂಚಕ್ರಕ್ಕೆ ಏಕಾಧಿಪತಿಯಾಗಿ ತನ್ನ ಪಟ್ಟಬಂಧೋತ್ಸವದ ಕುರುಹೆಂದು, ತನ್ನ ಶಕವನ್ನಾರಂಭಿಸಿದನು. ಅಂದಿನಿಂದ ಕರ್ನಾಟಕದಲ್ಲಿ

ಶಕವರುಷವನ್ನು ಪ್ರಾರಂಭಿಸಿ ವಿಕ್ರಮ ವರುಷವೇ ಪ್ರರೂಢವಾಗಿ ನಡೆ
ಸಿತು. ಆತನ ತರುವಾಯವೂ ಎಷ್ಟೊ ವರುಷ ಚಾಳುಕ್ಯ ವಿಕ್ರಮವರು
ಷವು ಪ್ರಚಾರದಲ್ಲಿದ್ದು ಮುಂದಿನ ಚಾಳುಕ್ಯ ದೊರೆಗಳು ದುರ್ಬ
ರಾದುದರಿಂದ ನಿಂತುಹೋಯಿತು.

ವಿಕ್ರಮಾದಿತ್ಯದೇವನ ಆಯುಷ್ಯದ ವಿಶೇಷವೇನೆಂದರೆ ಕ
ಹೂಡಿದ ಕದನಕಲ್ಲೋಲವೂ, ತೋರಿಸಿದ ಅನಾದೃಶವಾದ ಸಾಹಸ
ಪಟ್ಟ ದುರ್ಧರಸಂಕಟಗಳೂ ಸಿಂಹಾಸನಾರೋಹಣವಾದೊಡ
ಕೊನೆಗಂಡವು. ಮುಂದೆ ಆತನು ೫೦ ವರುಷ ಅವ್ಯಾಹತವಾಗಿ ರಾ
ವಾಳಿದರೂ ಯುದ್ಧಸಂದರ್ಭಗಳೇ ವಿಶೇಷವಾಗಿ ಉಂಟಾಗಲಿಲ್ಲ. ಶ
ರಾಜ್ಯದಲ್ಲೊಮ್ಮೆ ಪ್ರವೇಶಿಸುವ ಪ್ರಸಂಗಮಾತ್ರ ಬಂದಿತ್ತು.
ಆತನು ಗತಶತ್ರುವಾಗಿ ಶಾಂತತೆಯಿಂದ ರಾಜ್ಯಭಾರವನ್ನು ಕೈಕೊ
ದ್ದನು. ಅನ್ಯಸಾಮ್ರಾಜ್ಯದ ಮಹಾರಾಜರ ಒಡ್ಡೋಲಗದಲ್ಲಿಯೂ ಈ
ಯಶೋಗಾನದ ಇಂಪು ಇಡುಗಿತ್ತು. ಪರರಾಜ್ಯಗಳ ಆಪತ್ತಿ
ದುರ್ಘಟ ಪ್ರಸಂಗಗಳಲ್ಲಿ ವಿಕ್ರಮನ ಆಸರವನ್ನು ಮೇಲಿಂದ ಮೇ
ಕೇಳುತ್ತಿದ್ದರು. ಉತ್ತರದ ಮೇರೆಯಲ್ಲಿ ನರ್ಮದೆಯೂ ದಕ್ಷಿಣದ ಮೇ
ಯಲ್ಲಿ ತುಂಗಭದ್ರೆಯೂ ಚಾಳುಕ್ಯರಾಜ್ಯಕ್ಕೆ ಆಗಳತೆಯಾಗಿದ್ದವು. ಮಾ
ಚೇದಿಪ್ರಾಂತಗಳಲ್ಲಿ ಆಗ ರಾಜ್ಯಕ್ರಾಂತಿಯು ಮೈದೋರುತ್ತಿತ್ತು. ಧಾ
ಮತ್ತು ದಾಹಲೆಯ ಅರಸರು ವಿಕ್ರಮಾದಿತ್ಯನ ಪಡೆಯ ನೆರವನ್ನು ಬೇ
ದರು. ಈತನು ಬಲ್ಲಂಟರಾದ ದಂಡನಾಯಕರೊಂದಿಗೆ ನರ್ಮದೆಯನ್ನು
ದಾಟಿ ಹೋದನು. ಇವನಿಂದ ಅವರಿಬ್ಬರಿಗೂ ಒಳ್ಳೆಯ ಸಹಾ
ವಾಯಿತು. ಅಲ್ಲಿ ಕ್ರಾಂತಿಗಳನ್ನು ಹಿಂಗಿಸಿ ಆ ರಾಜ್ಯಗಳನ್ನು ವಿಕ್ರಮ
ಸುರಕ್ಷಿತವಾಗಿರಿಸಿದನು. ಮುಂದೆ ಬಂಗಾಲ ಆಸಾಮ ಪ್ರಾಂತ
ಪೃಥ್ವೀಶ್ವರರೂ ಈತನ ಬೆಂಬಲವನ್ನಪೇಕ್ಷಿಸಿದರು. ಅಲ್ಲಿಯವರೆ
ಹೋಗಿ ಕರ್ನಾಟಕದ ವಿಕ್ರಮ ವೈಭವವನ್ನೂ ಶ್ರೀ ವೈಭವವನ್ನು
ಪ್ರಕಾಶಪಡಿಸಿ ವಿಕ್ರಮನು ಜನ್ಮಭೂಮಿಗೆ ಬಂದನು.

ನಡುವೆ ಹೊಯ್ಸಳರು ಮಾತ್ರ ಸಾಮ್ರಾಜ್ಯದ ನಿಲವುಗೆಡಿಸ ಬೇಕೆಂದು ಹವಣಿಸಿದರು. ಹೊಯ್ಸಳರಲ್ಲಿ ವಿಷ್ಣುವರ್ಧನನು ದಿನದಿನಕ್ಕೆ ಪ್ರಬಲನಾಗುತ್ತ ನಡೆದಿದ್ದನು. ಆತನು ಚೋಳರನ್ನೋಡಿಸಿ ಗಂಗವಾಡಿ ಯನ್ನು ತನ್ನ ನಾಡಿಗೆ ಕೂಡಿಸಿಕೊಂಡಿದ್ದನು. ಆದರೆ ವಿಕ್ರಮಾದಿತ್ಯನು ತನ್ನ ಚಕ್ರವರ್ತಿಯೆಂದು ಆತನು ಒಪ್ಪಿಕೊಂಡನು. ವಿಕ್ರಮಾಂಕನಿಗೆ ಅಚ್ಚುಗಿ ಮುಂತಾದ ಶೂರ ದಳವಾಯಿಗಳ ಸಹಾಯವಿದ್ದುದರಿಂದಲೂ, ಆತನ ಶೌರ್ಯಕ್ಕೆ ರಿಪುಗಳು ಗಡಗಡನೆ ನಡುಗುತ್ತಿದ್ದುದರಿಂದಲೂ, ವಿಕ್ರಮಾಂಕನು ೯೮–೯೫ ವರ್ಷಗಳ ಮುಪ್ಪಿನವನಾಗಿದ್ದರೂ ಆತನ ಮೇಲೆ ತಿರುಗಿ ಬೀಳುವುದಕ್ಕೆ ಯಾರೂ ಧೈರ್ಯಪಡಲಿಲ್ಲ. ಇದಲ್ಲದೆ ಆತನು ಯಾತಗಿರಿ, ವಿಜಾಪುರ, ವಿಕ್ರಮಪುರ, ಬಳ್ಳಿಗಾಂವಿ ಮುಂತಾದ ಪಟ್ಟಣ ಗಳನ್ನು ಉಪರಾಜಧಾನಿಗಳನ್ನಾಗಿ ಮಾಡಿಕೊಂಡು ಪ್ರಸಂಗವಿಶೇಷ ಗಳಲ್ಲಿ ಅಲ್ಲಿಂದ ರಾಜ್ಯಕಾರಭಾರವನ್ನು ನಡಿಸಿ, ರಾಜ್ಯದಲ್ಲಿ ಸದಾ ಶಾಂತತೆ ಯನ್ನು ಕಾಯ್ದುಕೊಂಡನು. ವಾರಾಶಿಪರ್ಯಂತವಾದ ಧರೆಯೆಲ್ಲವನ್ನು ಏಕಛತ್ರದಿಂದ ಆಳಿ, ದುರ್ವಿನೀತರಾದ ಅವನೀಪಾಳರ ಬೇರನ್ನು ಕಿತ್ತು, ಗಲಗಲನೆ ನೀರೊಳಗೆ ಈಡಾಡಿ ಈ ವಿಕ್ರಮಾದಿತ್ಯದೇವನು ತನ್ನ ವಿಕ್ರಾಂ ತದ ಬಲ್ಪಿನಿಂದ ಮೆರೆದನು.

### ವೀರಮಾರ್ತಂಡನಾದ

# ವಿಷ್ಣುವರ್ಧನ

## ೧೧೦೬-೧೧೪೧

ಮನುಷ್ಯನು ಪರಮಾವಧಿ ಉನ್ನತವಾದ ಸ್ಥಿತಿಯನ್ನೈ
ಕಾಲವೇ ಬಹುಶಃ ಆತನ ನೀಚಸ್ಥಿತಿಯ ಪ್ರಾರಂಭದ ಕಾಲವು. ರಾಷ್ಟ್ರ
ಕೂಡ ಅತ್ಯಂತ ವೈಭವ ಶಿಖರಕ್ಕೆ ತಲುಪಿತೆಂದರೆ, ಮುಂದೆ ಅ
ಏರಲು ಅವಕಾಶವಿಲ್ಲದುದರಿಂದಲೋ ಏನೋ ಅದು ಹಿಂತಿರುಗಿ ಕೆ
ಯಲಾರಂಭಿಸುತ್ತದೆ. ಲಕ್ಷ್ಮಿಯು ಚಂಚಲಳಿದ್ದಂತೆ ವೈಭವವೂ ಚಂ
ಅದಕ್ಕೆ ಬಹಳ ಕಾಲ ಒಂದೆಡೆಗೆ ಕಾಲಿಟ್ಟು ಗೊತ್ತಿಲ್ಲ. ಶ್ರೇಷ್ಠ
ಮಹಾಪುರುಷನೊಬ್ಬನು ತನ್ನ ಬಾಹುಬಲದಿಂದ ರಾಜ್ಯವನ್ನು ವೈ
ಶಿಖರಕ್ಕೆ ತಲುಪಿಸಿದನೋ ಇಲ್ಲವೋ ಅಷ್ಟರಲ್ಲಿ, ಆ ವಂಶದಲ್ಲಿ ದು
ರಾದ ಅರಸರು ಹುಟ್ಟಿ, ಅದರ ಇಳಿಗಾಲಕ್ಕೆ ಮೊದಲು ಮಾಡುತ್ತಾ
ರಾಷ್ಟ್ರಕೂಟ ವಂಶದ ನೃಪತುಂಗನು ಅರತ್ತುನಾಲ್ಕು ವರ್ಷ ವೈ
ದಿಂದ ರಾಜ್ಯವಾಳಿ ಮಡಿದನು. ಆತನ ವಂಶದಲ್ಲಿ ಮುಂದೆ ತಿ
ನಾಲ್ಕನೆಯ ಗೋವಿಂದನಂಥ ಅರಸರು ಹುಟ್ಟಿದ್ದರಿಂದ ೬೦-೭೦ ವ
ಗಳೊಳಗೆ ರಾಷ್ಟ್ರಕೂಟ ರಾಜ್ಯವು ಮಣ್ಣುಪಾಲಾಯಿತು. ಹಾಗೆ
ಕುಂತಳೋರ್ವೀಶನಾದ ವಿಕ್ರಮಾಂಕದೇವನು ೫೦ ವರ್ಷ ವೈ
ಯಿಂದ ರಾಜ್ಯವಾಳಿ ಮಡಿದ ಕೂಡಲೆ, ಚಾಳುಕ್ಯರ ಮನೆತನಕ್ಕೆ
ಸ್ಥಿತಿಯು ಬರಲಾರಂಭಿಸಿತು. ಈ ಸಂದರ್ಭದಲ್ಲಿ ಹೊಯ್ಸಳವಂಶದ
ವರ್ಧನನು ಹುಟ್ಟಿ, ತನ್ನ ತೇಜದಿಂದಲೂ ದರ್ಪದಿಂದಲೂ ನೆರೆಯ ರಾ

ಗಳನ್ನು ಗೆದ್ದುಕೊಂಡು, ಹೊಯ್ಸಳ ವಂಶವನ್ನು ಸ್ವಾತಂತ್ರ್ಯಪಥಕ್ಕೆ ಹಚ್ಚಿದನು. ಚಾಲುಕ್ಯ ವಿಕ್ರಮನ ಆಳಿಕೆಯಲ್ಲಿಯೇ ಸಾಮ್ರಾಜ್ಯವನ್ನು ಒಳಗಿಂದೊಳಗೆ ಕೊರೆದು ತಿನ್ನುವ ಹುಳಗಳು ಹುಟ್ಟಿದ್ದವು. ಈ ಹುಳಗಳೆಂದರೆ, ವಿಕ್ರಮನ ಮಾಂಡಲಿಕ ಅರಸರು. ವಿಕ್ರಮನು ಅತುಲವಾದ ರಾಜ್ಯ ಸಂಪತ್ತಿಯನ್ನು ಸಂಪಾದಿಸಿದುದು ತನ್ನಲ್ಲಿ ಅಪಾರವಾದ ನಂಬುಗೆಯನ್ನಿಟ್ಟು, ಸಂಕಟ ಸಮಯದಲ್ಲಿ ತನ್ನಗೋಸ್ಕರ ತಮ್ಮ ನೆತ್ತರವನ್ನು ಬಸಿದ ತನ್ನ ದಳವಾಯಿಗಳ ಬಲದಿಂದ. ಆದುದರಿಂದ, ವಿಕ್ರಮನು ತನ್ನ ದಂಡನಾಯಕರಿಗೆ ಮಂಡಲೇಶ್ವರ ಪದವಿಯನ್ನಿತ್ತು ಅವರಿಗೆ ತಮ್ಮ ತಮ್ಮ ರಾಜ್ಯದಲ್ಲಿ ವಿಶೇಷವಾದ ಅಧಿಕಾರಗಳನ್ನು ಕೊಟ್ಟು, ಮನ್ನಿಸಿದನು. ಹೀಗೆ ಆತನು ಅವರಲ್ಲಿ ಇಟ್ಟ ಹೆಚ್ಚಿನ ವಿಶ್ವಾಸವೇ ಆತನ ತರುವಾಯದಲ್ಲಿ, ಸಾಮ್ರಾಜ್ಯಕ್ಕೆ ಮೃತ್ಯುವಾಗಿ ಪರಿಣಮಿಸಿತು. ವಿಕ್ರಮನ ಪ್ರಬಲವಾದ ಪುಣ್ಯಪ್ರಭಾವದ ಮೂಲಕ, ಆತನಿಗೆ ಆ ಕೇಡುಗಾಲವನ್ನು ನೋಡುವ ಪ್ರಸಂಗವು ಪ್ರಾಪ್ತವಾಗಲಿಲ್ಲ. ವಿಕ್ರಮಾದಿತ್ಯನ ತರುವಾಯ ಪಟ್ಟಕ್ಕೆ ಬಂದ ಅರಸರು ದುರ್ಬಲರಾಗಿರುವ ಸಂಧಿಯನ್ನು ಸಾಧಿಸಿ, ಮಾಂಡಲಿಕರು ತಮ್ಮ ತಮ್ಮ ರಾಜ್ಯದಲ್ಲಿ ಸ್ವತಂತ್ರರಾಗಿ ಆಳತೊಡಗಿದರು. ವಿಷ್ಣುವರ್ಧನನೂ ಹೀಗೆ ಸ್ವತಂತ್ರರಾದವರಲ್ಲೊಬ್ಬನು. ಆದರೆ ಈತನ ವಿಷಯದಲ್ಲಿ ಒಂದು ವಿಶೇಷ ಸಂಗತಿ ಉಂಟು. ಅದೇನೆಂದರೆ, ವಿಷ್ಣುವರ್ಧನನಾಗಲಿ, ಆತನ ವಂಶಜರಾಗಲಿ ಕೊನೆಯವರೆಗೆ ಚಾಳುಕ್ಯರ ಮೇಲೆ ತಿರುಗಿಬಿದ್ದು ತಾವು ಚಕ್ರವರ್ತಿಗಳೆಂದೆನ್ನಿಸಿಕೊಳ್ಳಲಿಲ್ಲ. ತಾವು ಚಾಳುಕ್ಯ ಚಕ್ರವರ್ತಿಗಳ ಮಹಾಮಂಡಲೇಶ್ವರರೆಂದೇ ತಮ್ಮನ್ನು ಕರೆದುಕೊಂಡರು. ಮುಂದೆ ಯಾವಾಗ ಚಾಳುಕ್ಯ ವಂಶವು ಕಲಚೂರಿಯ ಅರಸನಾದ ಬಿಜ್ಜಳನಿಂದ ಗ್ರಸ್ತವಾಗಿ ಮಾಡಲ್ಪಟ್ಟು, ಆ ವಂಶವು ಕೂಡ ಬಹಳ ದಿವಸ ಬಾಳದೆ ನಷ್ಟವಾಯಿತೋ ಆಗ ಮಾತ್ರ ಹೊಯ್ಸಳರು ತಾವು ಚಕ್ರವರ್ತಿಗಳೆಂದು ಹೇಳಿಕೊಂಡರು.

ಆದರೆ ಹೀಗೆ ಹೆಸರಿಗೆ ಮಾಂಡಲಿಕರಾಗಿದ್ದರೂ ವಸ್ತುತಃ ಅವರು ತಮ್ಮ ರಾಜ್ಯದಲ್ಲಿ ಸ್ವತಂತ್ರರೇ ಆಗಿದ್ದರು. ವಿಷ್ಣುವರ್ಧನನು ಗಡಿನೆಯ

ಶತಮಾನದ ಆರಂಭಕ್ಕೆ ಹೊಯ್ಸಳ ಸಿಂಹಾಸನವನ್ನೇರಿದಾಗ, ಹೊಯ್ಸಳ ವಂಶವು ಸ್ಥಾಪಿತವಾಗಿ ಸುಮಾರು ಒಂದು ನೂರು ವರ್ಷಗಳಾಗಿದ್ದುವು. ವಾಸಂತಿಕಾದೇವಿಯ ವರಪ್ರಸಾದದಿಂದಲೂ ತನ್ನ ಜೈನ ಗುರುವಿನ ಪ್ರೇರಣೆಯಿಂದಲೂ ಸಳನು ಚಿಕ್ಕದೊಂದು ರಾಜ್ಯವನ್ನು ಕಟ್ಟಿದ ಬಳಿಕ, ವಿನಯಾದಿತ್ಯ ಎರೆಯಂಗರಂತಹ ಶೂರಪುರುಷರು ಹುಟ್ಟಿ, ಹೊಯ್ಸಳ ರಾಜ್ಯವನ್ನೂ ಕೀರ್ತಿಯನ್ನೂ ಹಬ್ಬಿಸಿದರು. ಚಾಳುಕ್ಯರಿಗೂ ಚೋಳರಿಗೂ ಆದ ಅನೇಕ ಸಂಗರಗಳಲ್ಲಿ ಕನ್ನಡಿಗರಾದ ಹೊಯ್ಸಳರು ಸ್ವಾಭಾವಿಕವಾಗಿ ಚಾಳುಕ್ಯರಿಗೆ ಬೆಂಬಲರಾಗಿ ಯುದ್ಧಮಾಡುತ್ತಿದ್ದರು. ಅಲ್ಲದೆ ಹೊಯ್ಸಳರು ಚಾಳುಕ್ಯರೊಡನೆ ಶರೀರಸಂಬಂಧವನ್ನೂ ಬೆಳಸಿದ್ದರು. ವಿಕ್ರಮಾಂಕನ ತಂದೆಯಾದ ಆಹವಮಲ್ಲ ಸೋಮೇಶ್ವರನು ಹೊಯ್ಸಳ ವಂಶದ ಹೆಣ್ಣನ್ನು ಮದುವೆಯಾಗಿದ್ದನು. ವಿಷ್ಣುವರ್ಧನನ ಅಜ್ಜನಾದ ವಿನಯಾದಿತ್ಯನು ಚಾಳುಕ್ಯ ವಿಕ್ರಮನಿಗೆ ಅನೇಕ ಕದನಗಳಲ್ಲಿ ನೆರವಾಗಿ ಪ್ರಾಬಲ್ಯಕ್ಕೆ ಬಂದನು. ವಿಷ್ಣುವರ್ಧನನ ತಂದೆಯಾದ ಎರೆಯಂಗನು ಅರಸನಾಗದೆ ತೀರಿಕೊಂಡರೂ ವಿನಯಾದಿತ್ಯನ ಆಳಿಕೆಯಲ್ಲಿಯೇ ಚಾಳುಕ್ಯ ವಿಕ್ರಮನಿಗೆ ನೆರವಾಗಿ, ಆತನ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದನು. ಆತನ ಕಾಲದಲ್ಲಿ ಹೊಯ್ಸಳರ ರಾಜ್ಯವಿಸ್ತಾರವು ದೊಡ್ಡದಿರಲಿಲ್ಲ. ಕಡೂರ ಜಿಲ್ಲೆಯೂ ಅದರ ನೆರೆಯ ಪ್ರದೇಶವೂ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೂ ಮಾತ್ರವೇ ಅವರ ವಶದಲ್ಲಿದ್ದುವು. ಚಿಕ್ಕದಾದ ಈ ರಾಜ್ಯವನ್ನು ವಿಸ್ತರಿಸಿ, ಪೂರ್ವಕ್ಕೆ ಮುಳಬಾಗಿಲದ ಹತ್ತಿರಿರುವ ನಂಗಲಿಯವರೆಗೂ ದಕ್ಷಿಣಕ್ಕೆ ಕೊಂಗು ಮತ್ತು ಆನೆಮಲೆಗಳವರೆಗೂ ಎಂದರೆ ಈಗಿನ ಸೇಲಂ, ಕೊಯಿಮುತ್ತೂರ ಮತ್ತು ತ್ರಾವಣಕೋರಗಳವರೆಗೂ ಪಶ್ಚಿಮಕ್ಕೆ ಬಾರಕೂರವರೆಗೂ, ಉತ್ತರಕ್ಕೆ ಪೆದೊರೆ ಎಂದರೆ ಕೃಷ್ಣಾ ನದಿಯವರೆಗೂ ಹಬ್ಬಿಸಿದ ಶ್ರೇಯವು ನಮ್ಮೀ ಚರಿತ್ರನಾಯಕನಿಗೆ ಇರುತ್ತದೆ. ವಿಷ್ಣುವರ್ಧನನ ತಂದೆಯಾದ ಎರೆಯಂಗನು ಚಾಳುಕ್ಯ ಭೂಪಾಲನಿಗೆ ಬಲಗೈಯಂತಿದ್ದನು. ಆತನು ಮಾಳವರನ್ನು ಸೋಲಿಸಿ, ಧಾರಾನಗರವನ್ನು ಸುಟ್ಟು ಬೂದಿ ಮಾಡಿ ಚೋಳನನ್ನು ಎಳೆದು, ಸುಲಿದು ಅತ್ಯಂತ

